('ಶ್ರೀ'ಯವರು) ಯೌವನ, ಪೂರ್ವ ವಯಸ್ಸುಗಳಲ್ಲಿ....ಜ್ಞಾನಾರ್ಜನೆಗೈದರು; ಮೂರು ನಾಲ್ಕು ಭಾಷಾಸಾಹಿತ್ಯಗಳಲ್ಲಿ ಉತ್ಕೃಷ್ಟ ಪಂಡಿತರೆನ್ನಿಸಿಕೊಂಡರು, ದರ್ಶನ, ಮತಧರ್ಮ, ಮೇಲಾಗಿ ಮಾನವಸಂಸ್ಕೃತಿಯ, ಅಧಿಷ್ಠಾನ ಸಿದ್ಧಾಂತಗಳನ್ನೂ ಪ್ರಧಾನ ಚರಿತ್ರೆಯನ್ನೂ ಕರಗತಮಾಡಿಕೊಂಡರು; ತಾರುಣ್ಯದಲ್ಲಿಯೇ ಕನ್ನಡದ ಮೇಲಣ ಮಮತೆ ಹುಟ್ಟಿ, ಬೇರೂರಿ, ಬೆಳೆದು, ಘನವೃಕ್ಷವಾದ್ದರಿಂದ, ಅವರು ಕೇವಲ ಕನ್ನಡ ಸೇವಕರಾಗಿ ಉಳಿಯಲಿಲ್ಲ, ಕನ್ನಡ ಪೋಷಕರಾಗುವ ಸುಯೋಗವೂ ಅವರಿಗೆ ಬಂತು; ಜ್ಞಾನ, ವಿಜ್ಞಾನ, ಲಲಿತಕಲೆಗಳ ಮೇಲಣ ಲಕ್ಕರೆ—ಇವನ್ನು ನೂರಾರು ಸಾವಿರಾರು ಬಾಲಕ ಯುವಕ ವಯಸ್ಕರಿಗೆ, ಸುಮಾರು ಮೂವತ್ತು ವರ್ಷ ದಿನದಿನವೂ ಧಾರಾಳವಾಗಿ, ನಿರ್ವಂಚನೆಯಿಂದ, ಆಸಕ್ತಿ ಕುಗ್ಗದೆ ದಾನಮಾಡಿ ಋಣಮುಕ್ತರಾದರು;.... ಸಹಸ್ರಗಟ್ಟಲೆ ದ್ರವ್ಯವನ್ನು ಕನ್ನಡ ಪ್ರೋತ್ಸಾಹಕ್ಕೆ, ಕನ್ನಡ ಸಂಸ್ಥೆಗಳ ಅಭಿವೃದ್ಧಿಗೆ ದತ್ತಿ ಇತ್ತು, ಬಿರುದಾಂಕಿತರಾದರು; ಕರ್ನಾಟಕದ ಸಂದಿಗೊಂದಿಯನ್ನೂ ಬಿಡದೆ ಸಂಚರಿಸಿ,.... ಸಾತ್ವಿಕ ದೇಶಪ್ರೇಮ ಪುಳಕಿತರಾದರು; ಉತ್ಸಾಹ ನಂಬಿಕೆ ಧೈರ್ಯ ಆತ್ಮಗೌರವಗಳನ್ನು ಬಿತ್ತಿದರು, ಬೆಳಸಿದರು; ಚೇತನವನ್ನು ಉದ್ಧರಿಸುವ ದೊಡ್ಡ ಭಾವಭಾವನೆಗಳನ್ನು ಹರಸಿದರು, ಹರಡಿದರು; ವಿದ್ವಾಂಸರಿಗೆ, ಕವಿಗಳಿಗೆ ನವಜಾಗ್ರತಿಗೆ, ಕರುಣ್ಣಾಳು ಬೆಳಕಾದರು; ....ಕನ್ನಡದ ಆಚಾರ್ಯ ಪದವಿಯೇರಿದರು; ಮುಡಿಯುವುದಕ್ಕೆ ಮೊದಲೇ ಮೂಲಪುರುಷರಾದರು. ಪರಂಧಾಮದ ಪೂರ್ವವೇ ಪುರಾತನರಾದರು!

... ಒಟ್ಟಿನಲ್ಲಿ ಅವರೊಬ್ಬ ತಪಸ್ವಿ, ಸಿದ್ಧಪುರುಷ, ಸ್ಥಾಪನಾಚಾರ್ಯ ಎಂಬುದನ್ನು ಯಾರೂ ಪ್ರಶ್ನಿಸುವ ಹಾಗಿಲ್ಲ.

—ಎಸ್. ವಿ. ರಂಗಣ್ಣನವರ
'ಪೀಠಿಕೆ'ಯಿಂದ

ಬೆಲೆ : ರೂ. ೫.೦೦
ಕ್ಯಾಲಿಕೊ ಪ್ರತಿ : ರೂ. ೭.೦೦

ಕನ್ನಡ ಕಾವ್ಯಮಾಲೆ

# ಕನ್ನಡಿಗರಿಗೆ
# ಒಳ್ಳೆಯ ಸಾಹಿತ್ಯ

ಭಾಗಗಳು ೧-೨-೩

ಭಾಷಣಗಳು ಮತ್ತು ಲೇಖನಗಳು
ಮುನ್ನುಡಿಗಳು ಮತ್ತು ಲೇಖನಗಳು
ಕಾವ್ಯಾವಲೋಕನಂ

'ಶ್ರೀ'

ಶ್ರೀಮಾನ್ ಎಸ್. ವಿ. ರಂಗಣ್ಣನವರ
ಪೀಠಿಕೆಯೊಡನೆ



ಮೈಸೂರು
ಕಾವ್ಯಾಲಯ : ಪ್ರಕಾಶಕರು



ಹೈದರಾಬಾದು ಸಂಸ್ಥಾನದಲ್ಲಿ "ಶ್ರೀ"ಯವರು, ಮೇ ೧೯೩೭

## ಪೀಠಿಕೆ—೧

ಗುರುವರ್ಯ "ಶ್ರೀ" ಯವರು ಜೀವಿಸಿದ್ದಾಗ, ಅವರು ತಮ್ಮ ಪ್ರಯಾಣ ಪ್ರವಾಸಗಳನ್ನು ಬಹುಮಟ್ಟಿಗೆ ಕಡಿಮೆಮಾಡಿ, ಉಪನ್ಯಾಸ ಸಭಾಧ್ಯಕ್ಷತೆ ವಿಮರ್ಶೆಗಳನ್ನು ಅನಿವಾರ್ಯವೆಂದಾಗ ಮಾತ್ರ ಕೈಗೊಂಡು, ಒಂದೆಡೆ ಕುಳಿತು, ವ್ಯಾಖ್ಯಾನ ಭಾಷಾಂತರ ಸ್ವಂತಕೃತಿ ಮುಂತಾದ ಆವಶ್ಯಕ, ಅಮೂಲ್ಯ, ಶಾಶ್ವತ ಲೇಖನೋದ್ಯಮದ ಕಡೆಗೆ ತಮ್ಮ ಕಾಲ, ಗಮನ, ಆಸಕ್ತಿ, ಶಕ್ತಿಗಳನ್ನು ಹೆಚ್ಚು ಹೆಚ್ಚಾಗಿ ಏತಕ್ಕೆ ವಿನಿಯೋಗಿಸ ಬಾರದೆಂದು ಆಶಿಸುತ್ತಿದ್ದವರಲ್ಲಿ, ಆಕ್ಷೇಪಿಸುತ್ತಿದ್ದವರಲ್ಲಿ, ನಾನೂ ಒಬ್ಬ. ಆಗ ಅವರ ಸನ್ನಿಧಿಯಲ್ಲಿ, ಸಾಮೀಪ್ಯದಲ್ಲಿ, ನಾನು ನಿಂತಿರುತ್ತಿದ್ದುದರಿಂದ, ಅವರ ಇಡೀ ಜೀವಿತದ ಒಂದು ಅವಲೋಕನ ಅಶಕ್ಯವಾಗುತ್ತಿದ್ದುದರಿಂದ, ಆ ಆಶೆ, ಆಕ್ಷೇಪ, ನಿಷ್ಫಲವಾಯಿತಲ್ಲ ಎಂಬ ಕೊರಗು ನನ್ನ ಮನಸ್ಸಿನಲ್ಲಿ ಇತ್ತೇ ಇತ್ತು. ಈಗ "ಶ್ರೀ" ಯವರು ತಮ್ಮ ಐಹಿಕ ಯಾತ್ರೆಯನ್ನು ಪೂರ್ತಿ ಗೊಳಿಸಿಕೊಂಡು ಯಶೋಶರೀರದೊಡನೆ ಮೂಡಿರುತ್ತಾರಾಗಿ, ಅವರ ಆಕಾಂಕ್ಷೆ ಉತ್ಸಾಹ ಉದ್ವೇಗ ಪ್ರಯತ್ನ ವಿಜಯವೆಲ್ಲದರ ಸಮಗ್ರ ಸಮ ಕಟ್ಟಿನ ಪರಿಚಯ ನಮಗೆ ದೊರೆಯಲು ಅನುಕೂಲವಾಗಿದೆ. ಆಗ ಸಡಿಲವೂ ಆವೇಗಪೂರಿತವೂ ಕ್ರಮಭಂಗಬಾಧಿತವೂ ಎಂದು ಭ್ರಾಂತಿ ಹುಟ್ಟಿಸುತ್ತಿದ್ದ ಅವರ ಬಹುಮುಖದ ಬಾಳಿಕೆ, ಈಗ ಪರಿಪೂರ್ಣವಾದೊಂದು ಜೀವನ, ಸಮುದಾಯ ಸೌಂದರ್ಯದಿಂದ ಭೂಷಿತವಾದ ಜೀವನ, ಎಂದು ತೋರು ತ್ತಿದೆ. ಅವರ ಬದುಕು ದೃಢಾಭಿಪ್ರಾಯ ಪ್ರೇರಿತವಾದ್ದು, ಸುವ್ಯವಸ್ಥಿತ ವಾದ್ದು, ನೇರವಾದ್ದು, ತನ್ನ ಮುಖ್ಯ ಅಂಗ ಯಾವುದರಲ್ಲಿಯೂ ಬದಲಾ ವಣೆಯನ್ನು ಬಯಸುವಂಥಾದ್ದಲ್ಲ, ಬದಲಾವಣೆಯನ್ನು ಸಹಿಸುವಂಥಾದ್ದಲ್ಲ, ಎಂಬುದು ಈಗ ಸುಸ್ಪಷ್ಟ. "ಶ್ರೀ" ಯವರ ಮನೋಧರ್ಮ, ಗುಣರಾಶಿ, ಧ್ಯೇಯ, ಆಶಯ, ಬಲ, ಪರಾಕ್ರಮಗಳು ಅವರ ಸ್ಥಳ, ಸನ್ನಿವೇಶ, ಕಾಲ, ಆವರಣ, ಅವಕಾಶಗಳೊಡನೆ ಅಚ್ಚುಕಟ್ಟಾಗಿ ಹೊಂದಿಕೊಂಡುದರಿಂದ, ಅವರು ಹಿಡಿದುದನ್ನು ಹೆಚ್ಚು ಕಡಮೆ ಪೂರ್ತಿ ಸಾಧಿಸುವಂತಾಯ್ತು. ಅ ಮುಖ್ಯವಾದ ಈ ಅಂಶ ಆ ಅಂಶದಲ್ಲಿ ಹೇಗಾದರೂ ಆಗಲಿ, ಅವರ

ಜೀವಮಾನದ ಕಟ್ಟಕಡೆಯಲ್ಲಿ ಅವರು ತಾವಾಗಿ ಕೂಗಿಕರೆದ ಚಿಂತೆ ನಿರುತ್ಸಾಹ ಹತಾಶೆ ಯಾವುದೇ ಇರಲಿ, ಒಟ್ಟಿನಲ್ಲಿ ಅವರೊಬ್ಬ ತಪಸ್ವಿ, ಸಿದ್ಧಪುರುಷ, ಸ್ಥಾಪನಾಚಾರ್ಯ ಎಂಬುದನ್ನು ಯಾರೂ ಪ್ರಶ್ನಿಸುವ ಹಾಗಿಲ್ಲ.

ಒಂದಕ್ಷರವನ್ನು ಕಲಿಸಿದವನಾದರೂ ಉಪಾಧ್ಯಾಯ, ಉಪಾಧ್ಯಾಯನ ನಾಮಸ್ಮರಣೆ ವಿದ್ಯಾರ್ಥಿಯ ಕರ್ತವ್ಯ : ಇದು ಸಾಮಾನ್ಯ ಸಾನುತಿ. ಆದರೆ ಮೇಲ್ತರಗತಿಯ ಉಪಾಧ್ಯಾಯ, ನಿಜವಾದ ಗುರು, ಲಭಿಸುವುದು ಶಿಷ್ಯನ ಪೂರ್ವ ಪುಣ್ಯದಿಂದಲೇ. "ಶ್ರೀ" ಯವರನ್ನು ಗುರುವೆಂದು ನಂಬಿರುವವರೆಲ್ಲರೂ ಯಾವುದೋ ಒಂದು ಅತಿಶಯವಾದ, ಅಪೂರ್ವವಾದ, ಮಹಾಮಹಿಮೆಯುಳ್ಳ ಸೌಭಾಗ್ಯ ತಮಗೆ ದಕ್ಕಿದಂತೆ ಭಾವಿಸುತ್ತಾರೆ. "ಶ್ರೀ" ಯವರ ಶಿಷ್ಯರಲ್ಲಿ ಮೂರು ನಾಲ್ಕು ಬಗೆ. ಹಲಕೆಲವರು ಅವರ ನಿಶ್ಚಲ ಭಕ್ತರು, ಕೊಂಚಮಟ್ಟಿಗೆ ಅಂಧ ಶ್ರದ್ಧೆಯ ಹಿಂಬಾಲಕರು; ಅವರನ್ನೂ ಅವರ ಕಾರ್ಯವನ್ನೂ ಟೀಕಿಸುವ, ಪ್ರತಿಭಟಿಸುವ, ಕೃತ್ಯ ಈ ತರದ "ಶ್ರೀಕಂಠ ಮತ" ದವರಿಗೆ ಪರಮ ಪಾಪ. ಬಹಳ ಮಂದಿ ಶಿಷ್ಯರಾದರೋ "ಶ್ರೀ" ಯವರ ಬೋಧನೆಯಿಂದ ಉತ್ತಮ ಜ್ಞಾನ, ವಿಶಾಲ ಅನುಭವ, ಹೇರಳ ಆನಂದವನ್ನು ಪಡೆದು, ಅದರಿಂದ ತೃಪ್ತರಾಗಿ, ಅವರ ಹೆಸರನ್ನು ಉಚ್ಚರಿಸಿದೊಡನೆ ಹಿಗ್ಗಿ ಹೆಚ್ಚುವ ಅಭ್ಯಾಸದವರು. ಪ್ರತಿಯೊಬ್ಬ ದೊಡ್ಡ ಅಧ್ಯಾಪಕನಿಗೂ ಈ ಪಂಗಡದ ಶಿಷ್ಯ ಪ್ರಶಿಷ್ಯರ ಸಂಖ್ಯೆಯೇ ಅಧಿಕ. ಮತ್ತೆ ಕೆಲವರು ಮಾತ್ರ ಎಲ್ಲವನ್ನೂ ಪಿಕ್ಕಿ ನೋಡುವ, ಯಾವುದನ್ನಾದರೂ ತೂಕ ಮಾಡಲು ತವಕಿಸುವ, 'ಜಳ್ಳನ್ನು ತೂರಿ ಕಾಳನ್ನು ತುಂಬಿಕೊಳ್ಳಲು' ಆಟಿಸುವ, ನಿಷ್ಪಕ್ಷಪಾತ ಪ್ರಕೃತಿಯವರು. ಇವರ ರಕ್ತ ಬೇಗ, ಸುಲಭವಾಗಿ, ಸ್ವಲ್ಪ ಕಾರಣದಿಂದ, ಕುದಿದೇಳುವಂಥಾದ್ದಲ್ಲ. ತಲೆಬಾಗಿ ಗಮನಗೈಯುವ ಅನುಯಾಯಿಗಳಿಗೆ ಇವರು ವಾತ್ಸಲ್ಯಹೀನರು, ಕಠೋರಮತಿಗಳು, ಅಹಂಭಾವಲಾಂಛಿತರು. ಆದರೆ "ಕಡೆಗೆ ಉಳಿಯುವುದು ಅಭಿಮಾನವಲ್ಲ, ಸತ್ಯ" ವೆಂದು "ಶ್ರೀ" ಯವರೇ ಸಾರಿ ಸಾರಿ ಘೋಷಿಸಿಲ್ಲವೆ? ಎಂದಮೇಲೆ ದುರಭಿಮಾನ, ವಿಪರೀತಾಭಿಮಾನ, ಉಳಿಯಲಾಪುದೆ? ಆಗಲಿ; ಪರಿಶೀಲಿಸಲಿ, ತಕ್ಕಡಿ ಹಿಡಿಯಲಿ, ಕೇರಲಿ, ತೂರಲಿ: "ಶ್ರೀ" ಯವರ ವ್ಯಕ್ತಿತ್ವಕ್ಕೂ ಸಾಹಸ ಕೆಲಸಕ್ಕೂ ಅಂಜಿಕೆಯೇನು? ಅವರ ಜೀವಮಾನದ

ಗೆಯ್ಮೆಯನ್ನೂ ಅವರ ಜೀವನ ಗತಿಯನ್ನೂ ನೆನಪಿಗೆ ತಂದುಕೊಂಡರೆ ಹರ್ಷ ತಾನಾಗಿ ಊರಿ, ಹೊಳೆ ಹರಿದು ಆನಂದ ಸರೋವರವಾಗುತ್ತದೆ. ಯೌವನ ಪೂರ್ವ ವಯಸ್ಸುಗಳಲ್ಲಿ ತಮಗೆ ಸಿಕ್ಕಿದ ಕಾಲಾವಕಾಶವನ್ನು ಒಂದು ಕ್ಷಣವನ್ನಾದರೂ ವ್ಯರ್ಥವಾಗಲೀಯದೆ, ತದೇಕ ಚಿತ್ತರಾಗಿ, ಸರಸ್ವತೀ ಔಪಾಸನೆ ಮಾಡುವರೋ ಎಂಬಂತೆ ಆಚರಿಸುತ್ತ, ಜ್ಞಾನಾರ್ಜನೆಗೈದರು; ಮೂರು ನಾಲ್ಕು ಭಾಷಾ ಸಾಹಿತ್ಯಗಳಲ್ಲಿ ಉತ್ಕೃಷ್ಟ ಪಂಡಿತರೆನ್ನಿಸಿಕೊಂಡರು; ದರ್ಶನ, ಮತಧರ್ಮ, ಮೇಲಾಗಿ ಮಾನವ ಸಂಸ್ಕೃತಿಯ ಅಧಿಷ್ಠಾನ ಸಿದ್ಧಾಂತಗಳನ್ನೂ ಪ್ರಧಾನ ಚರಿತ್ರೆಯನ್ನೂ ಕರಗತಮಾಡಿಕೊಂಡರು; ತಾರುಣ್ಯದಲ್ಲಿಯೇ ಕನ್ನಡದ ಮೇಲಣ ಮಮತೆ ಹುಟ್ಟಿ, ಬೇರೂರಿ, ಬೆಳೆದು, ಘನವೃಕ್ಷವಾದ್ದರಿಂದ, ಅವರು ಕೇವಲ ಕನ್ನಡ ಸೇವಕರಾಗಿ ಉಳಿಯಲಿಲ್ಲ, ಕನ್ನಡ ಪೋಷಕರಾಗುವ ಸುಯೋಗವೂ ಅವರಿಗೆ ಬಂತು; ಜ್ಞಾನ ವಿಜ್ಞಾನ ಲಲಿತಕಲೆ ಸಂಸ್ಕೃತಿಗಳ ಮೇಲಣ ಆದರ, ಕನ್ನಡನಾಡು ಭಾಷೆ ಸಾಹಿತ್ಯಗಳ ಮೇಲಣ ಅಕ್ಕರೆ—ಇವನ್ನು ನೂರಾರು ಸಾವಿರಾರು ಬಾಲಕ ಯುವಕ ವಯಸ್ಕರಿಗೆ, ಸುಮಾರು ಮೂವತ್ತು ವರ್ಷ ದಿನ ದಿನವೂ, ಧಾರಾಳವಾಗಿ, ನಿರ್ವಂಚನೆಯಿಂದ, ಆಸಕ್ತಿ ಕುಗ್ಗದೆ, ದಾನ ಮಾಡಿ ಋಣಮುಕ್ತರಾದರು; ಬೋಧಕ ಶಿಖಾಮಣಿಯಾದರು; ಲಕ್ಷ್ಮೀ ಕಟಾಕ್ಷಕ್ಕೂ ಪಾತ್ರರಾಗಿ, ಉದಾರ ಹೃದಯದಿಂದ, ಅತಿಥಿ ಸತ್ಕಾರ ಶ್ರೀಮಂತರಾದರು; ಸಹಸ್ರಗಟ್ಟಲೆ ದ್ರವ್ಯವನ್ನು ಕನ್ನಡ ಪ್ರೋತ್ಸಾಹಕ್ಕೆ, ಕನ್ನಡ ಸಂಸ್ಥೆಗಳ ಅಭಿವೃದ್ಧಿಗೆ, ದತ್ತಿ ಇತ್ತು, ಬಿರುದಾಂಕಿತರಾದರು; ಕರ್ನಾಟಕದ ಸಂದಿಗೊಂದಿಯನ್ನೂ ಬಿಡದೆ ಸಂಚರಿಸಿ, ಚಿರಲಾವಣ್ಯ ನವಲಾವಣ್ಯದ ಕನ್ನಡ ತಾಯಿಯ ಪೂರ್ಣಾಲಿಂಗನದ ಸುರಸ ಸೌಖ್ಯವನ್ನು ಪುನಃ ಪುನಃ ಅನುಭವಿಸಿ, ಸಾತ್ವಿಕ ದೇಶಪ್ರೇಮ ಪುಳಕಿತರಾದರು; ಉತ್ಸಾಹ ನಂಬಿಕೆ ಧೈರ್ಯ ಆತ್ಮಗೌರವಗಳನ್ನು ಬಿತ್ತಿದರು, ಬೆಳೆಸಿದರು; ಚೇತನವನ್ನು ಉದ್ಧರಿಸುವ ದೊಡ್ಡ ಭಾವ ಭಾವನೆಗಳನ್ನ ಹರಸಿದರು, ಹರಡಿದರು; ವಿದ್ವಾಂಸರಿಗೆ, ಕವಿಗಳಿಗೆ, ನವಜಾಗ್ರತಿಗೆ, ಕರುಣಾಳು ಬೆಳಕಾದರು; ತಮ್ಮ ಆಶಾಶಿಶುಗಳು, ತಮ್ಮ ಶಿಷ್ಯರ ದಾದಿತನದ ಒಲುಮೆಯಲ್ಲಿ ಬೆಳೆದು ಘಟ್ಟ ಘಟ್ಟಿಯಾಗುತ್ತಿದ್ದುದನ್ನು, ಕಣ್ಣಾರೆ ಕಂಡು ಕುಣಿದಾಡಿದರು; ಕನ್ನಡದ ಆಚಾರ್ಯ ಪದವಿಗೇರಿದರು; ಮಡಿಯುವುದಕ್ಕೆ ಮೊದಲೇ

ಮೂಲಪುರುಷರಾದರು, ಪರಂಧಾಮದ ಪೂರ್ವವೇ ಪುರಾತನರಾದರು. ಇಂಥಾ ಮಹಾನುಭಾವನನ್ನು ಗುರುವಾಗಿ ಪಡೆಯುವುದು ದುರ್ಲಭ; ಪಡೆದವನು ದಿಟವಾಗಿ ಭಾಗ್ಯವಂತ. ಆ ಗುರುವಿನ ಪ್ರೀತಿಯ ಪಾತವನ್ನು ಮರೆಯದಿರುವುದು, ಬಳಕೆಗೆ ತರುವುದು, ಇತರರಿಗೆ ತೋರಿಸುವುದು, ಅವನ ಆದ್ಯ ಕರ್ತವ್ಯವಲ್ಲವೆ?

"ಶ್ರೀ" ಯವರ ಜೀವಮಾನವನ್ನು ನಾಲ್ಕು ಅವಧಿಗಳಾಗಿ ವಿಭಾಗಿಸಬಹುದು. ಮೈಸೂರು ಮಹಾರಾಜ ಕಾಲೇಜಿನ ಅಧ್ಯಾಪಕ ಗುಂಪಿಗೆ ಸೇರುವವರೆಗೆ ವಿದ್ಯಾರ್ಥಿ ದಸೆ: ಆಗ ಜ್ಞಾನ ಪ್ರಪಂಚದ ಬಾಹ್ಯರೇಖೆಗಳ ಪರಿಚಯ; ಸಾರಸ್ವತ ಲಾಲಸೆಗಳ ಅಂಕುರ. ಅಲ್ಲಿಂದ ಮುಂದೆ ಹದಿನೈದು ಹದಿನಾರು ವರ್ಷ, ಸುಮಾರು ೧೯೨೬ನೇ ಇಸವಿಯವರೆಗೆ, ಪೂರ್ವಸಿದ್ಧತೆಯ ಸಮಯ: ಆಗ ಅವಿಶ್ರಾಂತ ವ್ಯಾಸಂಗ, ಮನನ, ಮನ್ಥನ, ವಿದ್ಯಾರ್ಜನ; ಪ್ರಚಾರಕಾರ್ಯಕ್ಕೆ ಹಂಚಿಕೆ ಹವಣಿಕೆ; ಹಾಗೂ ಗೃಹಕೃತ್ಯದಲ್ಲಿ ದುರ್ಭರವಾದ ಅಳಲು ಅಗಲಿಕೆಗಳ ಉಣಿಸು, ತನ್ಮೂಲಕ ಚಿತ್ತಸ್ಥೈರ್ಯ ಮನೋನಿಗ್ರಹದ ಸಾಧನೆ, "ಹೊರಗೆ ಸಂಸಾರ, ಒಳಗೆ ಸನ್ಯಾಸ"ದ ಸಂಕಲ್ಪ. ಮೂರನೆಯ ಅವಧಿ ಸುಮಾರು ೧೯೪೨ನೇ ಇಸವಿಯವರೆಗೆ, ಹೆಚ್ಚು ಹೆಚ್ಚು ಮನೋರಥಸಿದ್ಧಿ ಪ್ರಖ್ಯಾತಿ ಸಂತೋಷಗಳ ಗಡು, ಗಡಿ; ಭಾಷಾ ಸಾಹಿತ್ಯಗಳ ದಣಿವಿಲ್ಲದ ಪ್ರಚಾರ; ಕರ್ನಾಟಕದ ಮೇಲೆ ಸಾಂಸ್ಕೃತಿಕ ದಂಡಯಾತ್ರೆ; ಕನ್ನಡಬಾವುಟವನ್ನು ಏರಿಸಿ ಹಾರಿಸಿ ಪ್ರಚಂಡ ದಿಗ್ವಿಜಯ. ಅಲ್ಲಿಂದ ಮರಣದವರೆಗೆ ಗೆಲವು ಕುಂದಿದ ಇಳಿಗಾಲ, ಮನೋವ್ಯಥೆಯ ಸಮಯ, ಒಂದು 'ರುದ್ರನಾಟಕ'ದ ಕೊನೆಯ ಅಂಕ. ಸ್ವಭಾವತಃ ಪುಸ್ತಕಪ್ರೇಮಿಗಳಾದ್ದರಿಂದ "ಶ್ರೀ" ಯವರು ಶ್ರದ್ಧೆ ವಹಿಸಿ, ಓದಿ, ತಿರುತಿರುಗಿ ಓದಿ, ಧ್ಯಾನಗೈದು, ನಿಸ್ಸಂದೇಹವಾದ ಅರಿವನ್ನು ಸಂಪಾದಿಸಿದುದು ಸರಿಯೇ. ಯೌವನ ಸಾಮಾನ್ಯವಾಗಿ ಪ್ರತಿಯೊಬ್ಬನಿಗೂ ಮಹಾಕಾಂಕ್ಷೆಗಳು ಮೂಡುವ ಪರ್ವಕಾಲ. ಅನೇಕರಲ್ಲಿ ಅವು ಪದವಿ ಅಧಿಕಾರ ಮದುವೆ ಮನೆ ಜಮೀನು ಮುಂತಾದ ಐಹಿಕ ಪುರುಷಾರ್ಥಗಳ ಸಲುವಾಗಿ ಜನಿಸಿ, ಅಲ್ಲಿಗೇ ನಿಂತುಬಿಡುವುದು, ಸಹಜ. ಹೃದಯದ ಶಿಕ್ಷಣ, ಮನಸ್ಸಿನ ವೈಶಾಲ್ಯ, ಆತ್ಮದ ಬಿಡುಗಡೆ, ಜೀವನದ ಸಿದ್ಧಿಗಳ ಸಲುವಾಗಿ ಅವು ಏಳುವುದು, ಹೊರಳುವುದು, ವಿರಳ. "ಶ್ರೀ"ಯವರು ತಾರುಣ್ಯದಲ್ಲಿಯೇ,

ತಮ್ಮ ಪಾಲಿಗೆ ದೈವನಿಯಾಮಕವೋ ಎಂಬಂತೆ ಬಂದ, ತಾವು ಜೀವಮಾನ ವೆಲ್ಲ ಕಂಕಣತೊಟ್ಟು ವ್ರತಗೈಯಲೇಬೇಕಾದ, ಮುಖ್ಯ ಕರ್ತವ್ಯಗಳ ಛಾಯೆಯನ್ನು ಕಂಡುಕೊಂಡರು. "ಡಿಳ್ಳಿ ನನಗೆ ಬಲುದೂರ. ಕನ್ನಡ ನಾಡಿನ ಹಳ್ಳಿ ನನಗೆ ಸಾಕೆಂದು, ನನ್ನ ವಿದ್ಯಾಭ್ಯಾಸ ಮುಗಿಯುವುದರೊಳಗೆ ನಾನು ನಿರ್ಧರಿಸಿಕೊಂಡೆನು....ಅದೇ ನನ್ನ ದೀಕ್ಷೆ, ನನ್ನ ವ್ರತ, ನನ್ನ ನೋಂಪಿ." "ಕನ್ನಡಿಗರ ಅದರಲ್ಲೂ ಮಕ್ಕಳ, ಹೆಣ್ಣುಮಕ್ಕಳ, ಒಕ್ಕಲು ಮಕ್ಕಳ ಮೆಚ್ಚುಗೆಯೇ ನಾನು ಎದಿರುನೋಡುವ ಫಲ". ಒಂದು ದೃಷ್ಟಿ ಕೋನದಿಂದ ಇದು ನಮ್ರವಾದ, ಸಂಕೋಚವಾದ, ಸಣ್ಣ ಆಸೆ; ಬಲಿಷ್ಠ ಪುರುಷನಿಗೆ ಕನ್ನಡನಾಡು ಸಾಕೆ ? ವಿಸ್ತಾರವಾದ ಭರತಭೂಮಿಯಿಲ್ಲವೆ ? ಗಂಗಾನದಿ ಕೂಗಿ ಕರೆಯುತ್ತಿರುವಾಗ ತುಂಗಭದ್ರೆಯಮೇಲೆ ಓಡು ನಡೆಸು ವುದೆ ? ಇರಬಹುದು, ಇರಲಿ : ಆದರೆ "ಶ್ರೀ"ಯವರು ಸಮ್ಮೋದದಿಂದ ಕಂಡ ಸವಿಗನಸುಗಳು ಕೇವಲ ಸ್ವಪ್ನದೃಶ್ಯಗಳಲ್ಲ, ನೆನಸಾಗಬಲ್ಲ ಅಭಿಮತ ಗಳು ; ಅವರು ಅಪ್ಪಿಕೊಂಡ ಆಲೋಚನೆಗಳು ತೋರಿಯೂ ತೋರದೆ ಹಾರಿಹೋಗುವ ಗಾಳಿಗೋಪುರಗಳಲ್ಲ, ಕಾರ್ಯಗತವಾಗಬಲ್ಲ ಸುಪುಷ್ಟ ಯೋಜನೆಗಳು. ಅವರೇ ವಿಡಂಬನಮಾಡಿ ಹೇಳಿದಂತೆ "ಇದಕ್ಕೂ ದೊಡ್ಡ ದೊಡ್ಡಧ್ಯೇಯಗಳನ್ನು ದೊಡ್ಡದೊಡ್ಡ ಮೇಧಾವಿಗಳಿಗೂ ಜಗದುದ್ಧಾರ ಕರಿಗೂ ಬಿಡಿ. ನಿಮ್ಮ, ನನ್ನ, ಜೀವಮಾನದ ತೀರ್ಪು ಕನ್ನಡತಾಯ ಸೇವೆ". ಎಂದ ಮಾತ್ರಕ್ಕೆ ಅವರಿಗೆ ಇಂಡಿಯದಲ್ಲಿ ದೇಶಭಕ್ತಿ ಇರಲಿಲ್ಲವೆಂದಲ್ಲ. "ಕನ್ನಡ ಮಾತೆಯ ಮೂಲಕ ಭಾರತಮಾತೆಯನ್ನು ಸೇವಿಸೋಣ. ಕನ್ನಡ ಮಾತೆ ಉದ್ಧಾರವಾದರೆ ಭಾರತಮಾತೆಯೂ ವೃದ್ಧಿಯಾಗುತ್ತಾಳೆ": ಇದೇ ಅವರ ಉದಾರಮತ,ಆಳದ ಅಭಿಪ್ರಾಯ. ಪ್ರತಿಯೊಬ್ಬರೂ ಅವರವರ ಮನೆ ಯನ್ನು ಅಂದಗೈದರೆ ಒಟ್ಟು ಕೇರಿಯೇ ಅಂದವಾಗಲಿಲ್ಲವೆ ? ಎಂದೂ, ನಮ್ಮ ತಾಯಿಯನ್ನು ನಾವೇ ಹೊಟ್ಟೆಗೆ ಹಾಕದೆ ಕೃಶವಾಗಲು ಬಿಟ್ಟರೆ ಬೇರೆಯವರು ಬೇಗ ಬಂದು ಪೋಷಿಸುತ್ತಾರೆಯೇ ? ಎಂದೂ, ಅವರು ಆಗಾಗ ಆವೇಗದಿಂದ ವಾದಿಸುತ್ತಿದ್ದುದು, ಎಚ್ಚರಿಸುತ್ತಿದ್ದುದು, ನನಗೆ ಚೆನ್ನಾಗಿ ಜ್ಞಾಪಕ. ಕನ್ನಡನಾಡಿನ ಕಲ್ಯಾಣವೆನ್ನುವುದರಲ್ಲಿ ಅವರ ಅರ್ಥ ವಾವುದು? ಕನ್ನಡಿಗರು ನಿದ್ರೆಯಿಂದೇಳಬೇಕು, ಜಡತ್ವವನ್ನು ಕೊಡಹಬೇಕು; ಅಂಥ ಸಂಪ್ರದಾಯಗಳನ್ನು ಕಳೆದುಕೊಂಡು, ವಿಚಾರಪರರಾಗಿ, ಸತ್ವಶಾಲಿ

ಗಳಾಗಬೇಕು. ಜನತೆಯನ್ನು ಪ್ರಚೋದಿಸಿ, ಬೆನ್ನುತಟ್ಟಿ, ಶ್ರೇಯಸ್ಸಿನ ಮಾರ್ಗಕ್ಕೆ ಕೊಂಡೊಯ್ಯುವುದು ನಾಡಿನಲ್ಲಿ ಓದಿದವರ, ನಾಯಕರ, ಗುರುತರವಾದ, ಅಲಕ್ಷಿಸಲಾಗದ ಜವಾಬ್ದಾರಿ. ಈ ದೊಡ್ಡ ಕೆಲಸವನ್ನು ಪೂರೈಸಲು, ಹಿಂದಿನ ಕನ್ನಡ ಕಾವ್ಯಗಳನ್ನೆಲ್ಲಾ ವಿವೇಕವಾಗಿ ಪಠಿಸಿ, ಜನರಲ್ಲಿ ಅವನ್ನು ವಿವೇಚನೆಯಿಂದ ಬಳಕೆಗೆ ತರಬೇಕು; ಪ್ರಪಂಚದ ಉತ್ಕೃಷ್ಟ ಗ್ರಂಥಗಳನ್ನು—ಪ್ಲೇಟೋ, ಗ್ರೀಕರ ರುದ್ರನಾಟಕ, ಷೇಕ್ಸ್‌ಪಿಯರ್, ಕಾರ್ಲೈಲ್, ಇತ್ಯಾದಿ—ಸುಲಭವಾಗಿ ಸರಲವಾಗಿ ಕನ್ನಡಿಸಿಕೊಡಬೇಕು; ಹೊಸ ಕಾಲಕ್ಕೆ ತಕ್ಕ ಪುಸ್ತಕಗಳನ್ನು ಸದುದ್ದೇಶದಿಂದ, ಕಷ್ಟಪಟ್ಟು, ರಚಿಸಬೇಕು;—ಇಂತು ಕನ್ನಡ ಜನತೆಯ ಏಳಿಗೆಯ ಸಾಧನೆ. ಇದು "ಶ್ರೀ" ಯವರು ಪುನಃ ಪುನಃ ಜಪಿಸಿ, ಜಪಿಸಿ, ಬೆಂಡಾಗುತ್ತಿದ್ದ ಮಂತ್ರ. ಇಂಥಾ ಅಭಿಪ್ರಾಯಗಳು ಈಗ ಸರ್ವಸಾಮಾನ್ಯವಾದ ಸೊತ್ತಾಗಿ ಹೋಗಿವೆ. ಆದರೆ ಮೂವತ್ತೈದು ನಲವತ್ತುವರ್ಷಗಳ ಹಿಂದಿನ ಪರಿಸ್ಥಿತಿಯನ್ನ, ಮೌಢ್ಯವನ್ನ, ಹಗೆತನವನ್ನ, ಕೊಂಚ ಲೆಕ್ಕಿಸೋಣ. ಆಗಿನ ಸನ್ನಿವೇಶದಲ್ಲಿ; ಇಂಗ್ಲಿಷ್ ಭಾಷೆ ಸಾಹಿತ್ಯಗಳ ಸಾಮ್ರಾಜ್ಯ ಅಬಾಧಿತವಾಗಿ, ಆಡಂಬರದ ಅಟ್ಟಹಾಸದಲ್ಲಿ, ನೆಲೆಸಿದ್ದಾಗ; ಪಾಶ್ಚಾತ್ಯ ಪದ್ಧತಿಗಳು ವಿದ್ಯಾವಂತರನ್ನು ವರವೇಶ್ಯೆಯರಂತೆ ಅಪಹರಿಸಿ ಗುಲಾಮಗಿರಿಯಲ್ಲಿಟ್ಟಿದ್ದಾಗ; ನೆರೆಹೊರೆಯವರ ಇಷ್ಟಮಿತ್ರರ ವೈರಕ್ಕಾಗಲೀ ವಾದಕ್ಕಾಗಲೀ ಲೇವಡಿಗಾಗಲೀ ಮಾಯಕ್ಕಾಗಲೀ ಬೆದರದೆ, ಕನ್ನಡವನ್ನು ಕುರಿತು ಹೀಗೆ ಕುದ್ದುಕೊಂಡು ಕನ್ನಡ ಸೇವೆಯ ಪ್ರತಿಜ್ಞೆಯನ್ನು ಎದೆಯ ಗುಹಾಂತರದಲ್ಲಿ ನಿಶ್ಚಲವಾಗಿ ನೆಟ್ಟುಕೊಳ್ಳುವುದು ತಾತ್ಕಾಲಿಕ ಹೆಡ್ಡತನ, ಉತ್ತರೋತ್ತರ ದೊಡ್ಡತನ, ಅಲ್ಲವೆ! ಆ ಭಾರಿ ಆಶಯಕ್ಕಾಗಿ ಎಷ್ಟೊಂದು ಕಾಲ, ಎಷ್ಟು ವಿಧದಲ್ಲಿ, ಹೇಗೆ ದುಡಿದರು ನಮ್ಮ "ಶ್ರೀ" ಯವರು! ಅಲ್ಲಿ ಇಲ್ಲಿ ಎಲ್ಲ ಕಡೆಯಲ್ಲೂ ಸುತ್ತಾಟ; ಮೇಲಿಂದ ಮೇಲೆ ಸಮಿತಿ ಸಭೆ ಸಮ್ಮೇಳನ; ಒಂದು ಭಾಷಣ ಮುಗಿದ ಘಳಿಗೆ ಮತ್ತೊಂದು ಭಾಷಣ; ಘಂಟೆಗಟ್ಟಲೆಯ ಉಪನ್ಯಾಸ; ಹತ್ತಾರು ಗಣ್ಯವ್ಯಕ್ತಿಗಳನ್ನು ಭೇಟಿ ಮಾಡುವುದು; ನೂರಾರು ಮಾನ್ಯಮಂದಿಗೆ ಭೇಟಿ ಕೊಡುವುದು; ಅಕ್ಷರಪ್ರಚಾರ, ಲಿಪಿಸುಧಾರಣೆ; ವಯಸ್ಕರ ಶಿಕ್ಷಣ; ಮೊದಲನೇ ತರಗತಿಯಿಂದ ಎಂ. ಎ. ತರಗತಿಯವರೆಗೆ ಕನ್ನಡ ಪಠ್ಯಪುಸ್ತಕಗಳ ಪರಿಷ್ಕರಣ; ವಿಶ್ವವಿದ್ಯಾನಿಲಯದಲ್ಲಿ ಕನ್ನಡಕ್ಕೆ ಸಂಬಂಧಿಸಿದ ಸೂಕ್ಷ್ಮ

ವ್ಯವಹಾರಗಳು; ಸಾಹಿತ್ಯ ಪರಿಷತ್ತಿನ ಹಲವಾರು ಜಟಿಲ ಸಮಸ್ಯೆಗಳು ; ಒಂದು ಮಾತಿನಲ್ಲಿ ಸಂಕ್ಷೇಪಿಸುವುದಾದರೆ, ಈಗತಾನೆ ಮುಗಿದ ತಲೆಮಾರಿನ ಕರ್ನಾಟಕದ ಎಲ್ಲ ಪ್ರಗತಿ ಪ್ರಯತ್ನಗಳಿಗೂ ಅವರು ಚೈತನ್ಯದುಸಿರು, ಜೀವರಕ್ತ, ವಾಹಕ ಶಕ್ತಿಯಾಗಿದ್ದರು. ಅದೆಲ್ಲಿ ಅವರಿಗೆ ಬಿಡುವು ಸಿಕ್ಕುತ್ತಿತ್ತೋ, ಅದೆಂತು ಅವರು ಬಿಡುವು ಮಾಡಿಕೊಳ್ಳುತ್ತಿದ್ದರೋ, ಕಾಲಾಧಿಪತಿಯೇ ಬಲ್ಲ ! ಒಂದು ಗಮನಾರ್ಹವೂ ಸಂತೃಪ್ತಿಕರವೂ ಆದ ವಿಚಾರ. ಕಾಲೇಜಿನ ಅಧ್ಯಾಪಕ ವೃತ್ತಿಯಲ್ಲಿ ಅವರ ಅಲಸಿಕೆಯನ್ನಾಗಲೀ ನಿರುತ್ಸಾಹವನ್ನಾಗಲೀ ಯಾವ ಹೊತ್ತೂ ಕಂಡವರಿಲ್ಲ. ಒಂದು ವಾರಕ್ಕೆ ಇಷ್ಟೆಂದು ಗೊತ್ತಾದ ಎಂಟು ಹತ್ತು ಘಂಟೆಗಳ ಬೋಧನ ಹಾಗಿರಲಿ ; ಅದಕ್ಕಿಂತ ಎಷ್ಟೋ ಹೆಚ್ಚು ಘಂಟೆಗಳ ಕಾಲ ಅವರು ಅತ್ಯಂತ ಒಲವಿನಿಂದ ಗೆಲವಿನಿಂದ ತಮ್ಮ ಪುಣ್ಯವಂತ ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತಿದ್ದರು. ಅವರಂಥಾ ಕಾರ್ಯ ತತ್ಪರರು ಮತ್ತೆಲ್ಲಿ? ಪತ್ನೀವಿಯೋಗವಾದ ಮಾರನೆಯ ದಿವಸ ಅವರು ಕಾಲೇಜಿಗೆ ಬಂದು ಎಂದಿನಂತೆ ಉಪನ್ಯಾಸಮಾಡಿದ ಆಶ್ಚರ್ಯ ಸಂಗತಿ ಕೆಲವರ ನೆನಪಿನಲ್ಲಿರಬಹುದು. 'ರಜ ತೆಗೆದುಕೊಳ್ಳಿ, ಸ್ವಲ್ಪ ವಿಶ್ರಾಂತಿ ಪಡೆಯಿರಿ' ಎಂದರೆ ಅವರು 'ರಜ ತೆಗೆದುಕೊಂಡು ನಾನೇನು ಮಾಡಲಿ ?' ಎನ್ನುತ್ತಿದ್ದರು. ಪಿತೃಗಳ ಆರಾಧನೆ ಭಾನುವಾರ ಬಾರದೆ ಹೋಗುತ್ತಲ್ಲ, ಎಂದು ಅವರು ಕಳವಳಿಸಿದ್ದುಂಟು. ಬಲಭುಜದ ಮೂಳೆ ಮುರಿದಿದ್ದಾಗ, ಬಹು ಕಷ್ಟದಿಂದ, ದಟ್ಟಿಪಂಚೆ ಶರಟು ಮೇಲೊಂದು ಕರಿಯ ಗೌನು ತಲೆಗೊಂದು ಟೋಪಿಯ ವಿಚಿತ್ರ ಉಡುಪನ್ನು ಧರಿಸಿ, ಕಾಲೇಜಿಗೆ ಬಂದು, ಎಡದಕೈಯಲ್ಲಿ ಪ್ರಯಾಸದಿಂದ ಷೇಕ್ಸ್‌ಪಿಯರ್ ನಾಟಕವನ್ನು ಹಿಡಿದುಕೊಂಡು, ಪಾಠ ಹೇಳಿದ ಪವಾಡವನ್ನು ಕಣ್ಣಾರೆ ಕಂಡವರಿದ್ದಾರೆ. ಅದೊಂದು ಗುಣದ್ಯೋತಕವಾದ ಸ್ವಾರಸ್ಯ ಕಥೆ. ಪ್ರಾಯಶಃ ಆ ಪ್ರಸಂಗದಲ್ಲಿ "ಶ್ರೀ"ಯವರು ಒಂದೆರಡು ತಿಂಗಳು ರಜ ಬೇಡುತ್ತಿದ್ದರು. ಅವರಿಗಾದ ಅಪಘಾತವನ್ನು ಕೇಳಿ, ಕಾಲೇಜಿನ ಮುಖ್ಯಸ್ಥ ಸೆಲ್, ಅವರ ಮನೆಗೆ ಹೋಗಿ, ಅವರು ಮಲಗಿದ್ದ ಕೋಣೆಯೊಳಕ್ಕೆ ಕಾಲಿಟ್ಟೊಡನೆ, "ಸರಿ, ಕಾಲೇಜಿನ ನಿಮ್ಮ ಪಾಠಗಳಿಗೆ ಏರ್ಪಾಡೇನು ?" ಎಂದನಂತೆ. ಅತಿ ಸೂಕ್ಷ್ಮ ಪ್ರಕೃತಿಯ "ಶ್ರೀ"ಯವರು ತಕ್ಷಣ, "ನಿಮಗೇಕೆ ಚಿಂತೆ, ಸ್ವಾಮಿ, ನನ್ನ ಪಾಠಗಳನ್ನು ನಾನೇ ಮಾಡುತ್ತೇನೆ!" ಎಂದು ಉತ್ತರವಿತ್ತರು

ಮೊದ್ದು ಸೆಲ್ಲಿಗೆ ಆ ಅಣಕ ಅರ್ಥವಾಗುವುದುಂಟೆ? ಆದರೂ ಅವನು ಆಗ ಭೂಮಿಗಿಳಿದು ಹೋಗಿರಬೇಕು. ಪರಿಹಾಸಕ್ಕಾಗಿ "ಶ್ರೀ"ಯವರು ಒಂದೊಂದು ವೇಳೆ ನುಡಿಯುತ್ತಿದ್ದರು: "'ಗುರು' ದೊಡ್ಡ ಹೆಸರು; ನಾವು ಸಂಬಳದ ಉಪಾಧ್ಯಾಯರು." ಸಂಬಳದ ಉಪಾಧ್ಯಾಯರಲ್ಲಿ ನೂರಕ್ಕೆ ಐವತ್ತು "ಶ್ರೀ"ಯವರ ಮೇಲ್ಪಂಕ್ತಿಯನ್ನು ಅನುಸರಿಸಿದರೆ ನಮ್ಮ ದೇಶವನ್ನು ಹಿಡಿಯುವವರಾರು! ಮೈಸೂರಿನಲ್ಲಿ ಪ್ರಾಧ್ಯಾಪಕವೃತ್ತಿಯಿಂದ ನಿವೃತ್ತರಾದಮೇಲೂ ಅವರು ಧಾರವಾಡಕ್ಕೆ ಧಾಳಿಸಿ, ಕಾಲೇಜೊಂದರ ಮುಖ್ಯಸ್ಥರಾಗಿರಲಿಲ್ಲವೆ? ಅಷ್ಟೇಕೆ: ಅಧ್ಯಾಪಕ ನಿಲುವಂಗಿ ಸಹಿತ ತಾನೆ ಅವರು ವಿಧಿಮುಖವನ್ನು ಹೊಕ್ಕದ್ದು! ಯಾವ ದರ್ಜೆಯ ಜೀತವಾದರೂ ಜೀತಗಾರರಲ್ಲಿ ಮೂರು ವಿಧ; ತೆಗೆದುಕೊಳ್ಳುವ ಶುಲ್ಕಕ್ಕಾಗಿ, ಅದರ ಅಳತೆಯಷ್ಟುಮಾತ್ರ, ಕೃಷಿಗೈಯುವ ಊನಮನರ ದೊಡ್ಡಗುಂಪು; ಬೇರೆ ಹವ್ಯಾಸದಲ್ಲಿ ಮಗ್ನರಾಗಿಯೋ, ಸೋಮಾರಿತನದಲ್ಲಿ ಬಿದ್ದುಕೊಂಡೋ, ಅಂತು ಇಂತು ಕೆಲಸಮಾಡದೆ 'ಪಗಾರ' ದೋಚುವ 'ಅದೃಷ್ಟಶಾಲಿ'ಗಳ ಸಣ್ಣ ಗುಂಪು; "ಶ್ರೀ"ಯವರಂತೆ ದುಡ್ಡಿನ ಹಂಬಲನ್ನು ಸಂಪೂರ್ಣವಾಗಿ ಕೆಳಕ್ಕೊತ್ತಿ, ಕೇವಲ ಆತ್ಮವಿಮೋಚನೆಗಾಗಿ, ದೇಹವನ್ನು ದಂಡಿಸುವವರು ಅಲ್ಲೊಬ್ಬ ಇಲ್ಲೊಬ್ಬ. ಮೈ ಮನಸ್ಸನ್ನು ಮನ್ನಿಸದೆ, ಒಂದು ಕ್ಷಣ ಕುಳ್ಳಿರಲೂ ಒಲ್ಲದೆ, ಕರ್ಮನಿರತರಾಗುವುದು ಧ್ಯೇಯಜೀವಿಗಳ ಹುಚ್ಚು. ಸ್ವಾಮಿ ವಿವೇಕಾನಂದರನ್ನು "ದೇವರೆಂದರೆ ನಿನಗೆ ಮತಿಭ್ರಮೆಯೆನ್ನುತ್ತಾರೆ: ಅದೇತಕ್ಕೆ ಹಾಗೆ?" ಎಂದೊಬ್ಬ ಅಮೇರಿಕದವ ಆಕ್ಷೇಪಿಸಲು, ಸ್ವಾಮಿಜಿ ಜವಾಬುಕೊಟ್ಟರಂತೆ: "ಅಹುದು: ಕೆಲವರಿಗೆ ಹೆಂಗಸೆಂದರೆ ಹುಚ್ಚು; ಕೆಲವರಿಗೆ ಮದ್ಯವೆಂದರೆ ಹುಚ್ಚು; ನನಗೆ ದೇವರೆಂದರೆ ಹುಚ್ಚು, ಅಷ್ಟೆ!" "ಶ್ರೀ"ಯವರನ್ನು ಕನ್ನಡದ ಬುದ್ಧಿಗೇಡಿಯೆನ್ನೋಣವೆ, ನಮ್ಮನ್ನು ಮಂದಬುದ್ಧಿಗಳೆಂದುಕೊಳ್ಳೋಣವೆ?

ಇಂಥಾ ಭಾರಿ ಹೊಣೆಗಾರಿಕೆಯ, ಅಧಿಕ ಕಷ್ಟದ, ಅತ್ಯಗತ್ಯವಾದ ಮಹತ್ಕಾರ್ಯವನ್ನು ಎಸಗುವಾಗ, ನಾನಾ ತೊಡರುಗಳು, ಲೌಕಿಕ ದಾಕ್ಷಿಣ್ಯಗಳು, ಧರ್ಮಸಂಕಟಗಳು, ಚಿತ್ತ ಚಾಂಚಲ್ಯಗಳು, ಹೃದಯ ದೌರ್ಬಲ್ಯಗಳು, ಕ್ಷುದ್ರ ಬಾಧೆಗಳು, ತಬ್ಬಿಬ್ಬುಗಳು, "ಶ್ರೀ"ಯವರಿಗೆ ಒದಗಿಬಂದುದು ಪ್ರಕೃತಿವಿಲಾಸ. ಭಿನ್ನರುಚಿಗಿಂತ ಭಿನ್ನಾಭಿಪ್ರಾಯ

ಸಮಾಜದಲ್ಲಿ ಹೆಚ್ಚು ಅನರ್ಥಕರ. ಅದರಲ್ಲಿಯೂ ಭರತವರ್ಷ ರಾಜಕೀಯ ಸ್ವಾತಂತ್ರ್ಯವನ್ನು ಗಳಿಸಲು ಅಸಮಾನ ಹೋರಾಟ ಹೂಡಿದ್ದ ಉತ್ಕಟ ಸಮಯದಲ್ಲಿ, ಗೊಂದಲಗಳ ಪ್ರಮಾಣ, ಸಂಖ್ಯೆಗಳನ್ನು ಬಣ್ಣಿಸಲಾದೀತೆ ? "ಶ್ರೀ"ಯವರು ಎಲ್ಲವನ್ನೂ ಎದುರಿಸಿ, ವಿಜಯಶಾಲಿಗಳಾದರೆಂದು ಭಾವಿಸುವುದು ಸಲ್ಲದ ಉತ್ಪ್ರೇಕ್ಷೆ. ಒಂದೆರಡು ಅಂಶಗಳಲ್ಲಿ ಅವರದ್ದು ಹಿನ್ನಡೆಯೇ ಹೊರತು ಮುನ್ನಡೆಯಲ್ಲ; ಒಂದೆರಡು ವಿಚಾರಗಳಲ್ಲಿ ಅವರ ಚಿತ್ತಕ್ಕೆ ನಿಶ್ಚಲತೆ ಪ್ರಿಯ, ಚಲನೆ ಅಪ್ರಿಯ. ಕೊರತೆಕಾಣದ ನಯ ವಿನಯ ಅವರಲ್ಲಿ ಮನೆಮಾಡಿಕೊಂಡಿದ್ದರೂ, ಆ ಕೆಲವು ಅಭಿಮತಗಳ ಬಗ್ಗೆ ಅವರು ಖಂಡಿತವಾಗಿ ಹಟ ತೊಡುತ್ತಿದ್ದರು. ಚಕ್ರವರ್ತಿಗಳಲ್ಲಿ, ಮಹಾರಾಜರಲ್ಲಿ, ಆಡಳಿತದ ಮುಖ್ಯಾಧಿಕಾರಿಗಳಲ್ಲಿ, ಅವರಿಗೆ ಅಚ್ಚಳಿಯದ ನಂಬಿಕೆ, ವಿಶ್ವಾಸ, ಭಕ್ತಿ; ಬ್ರಿಟಿಷರನ್ನು, ಬ್ರಿಟಿಷ್ ಚಕ್ರಾಧಿಪತ್ಯವನ್ನು, ಕುರಿತು ಅವರಿಗೆ ಹೆಗ್ಗೌರವ. ಆದ್ದರಿಂದ ಅವರದ್ದು ದಿಟವಾಗಿ ಸಂಸ್ಕೃತಿಯ ಪುನರುಜ್ಜೀವನ ಪ್ರಯತ್ನವಾದರೂ, ರಾಜಕೀಯ ಆವರ್ತಗಳಲ್ಲಿ ಅವರು ಹೇಗೋ ಸಿಕ್ಕಿಕೊಂಡುಬಿಡುತ್ತಿದ್ದರು. ಮಾತನಾಡುವ ಭರದಲ್ಲಿ ಬಹುಮಂದಿಯನ್ನು ಕೆರಳಿಸುವ ಬಿರುನುಡಿಗಳನ್ನು ಆಡಿಬಿಡುತ್ತಿದ್ದರು. ಅಷ್ಟೇ ಅಲ್ಲದೆ, ಆ ಪಂಗಡ ಈ ಪಂಗಡದವರೊಡನೆ ಬೆರೆತು, ಮಾತುಕಥೆ ವ್ಯವಹಾರ ವಿಚಾರ ವಿನಿಮಯ ನಡೆಸಬೇಕಾಗಿ ಬರುತ್ತಿದ್ದುದರಿಂದ, ಆಯಾ ಮತೀಯರಿಗೆ ರುಚಿಸುವಂಥಾ ಅತ್ಯುಕ್ತಿಯನ್ನೂ ಆತ್ಮನಿರಾಕರಣೆಯನ್ನೂ ಉಚ್ಚರಿಸಿಬಿಡುತ್ತಿದ್ದರು. "ಆ ಪಂಪನೆಲ್ಲಿ, ಈ ಗಾಂಪನೆಲ್ಲಿ ?" "ಹರಿಹರ ಕನ್ನಡ ಜಾಣನೂ ಅಹುದು, ಕನ್ನಡ ಪ್ರಾಣನೂ ಅಹುದು." "ಶ್ರೀ"ಯವರ ಆತ್ಮ ಮುಡಿಪಾಗಿದ್ದದ್ದು ಅತ್ಯುನ್ನತ ಧ್ಯೇಯಗಳಿಗೆ, ರವೆಯಷ್ಟೂ ಮುಕ್ಕಾಗದ ಸರ್ವಾಂಗಸುಂದರವಾದ ಅಭಿವೃದ್ಧಿಗೆ, ಪರಿಪೂರ್ಣತೆಗೆ. ಅವರ ಈ ಪದ ಮದ್ದಲೆಯನ್ನು ಲಾಲಿಸಿ. "ತಾರತಮ್ಯ ಜ್ಞಾನವುಳ್ಳವರು ಯಾರು ತಾನೇ ಕೀಳನ್ನು ಮೇಲೆಂದೂ, ಸಾಮಾನ್ಯವಾದದ್ದನ್ನು ಉತ್ಕೃಷ್ಟವೆಂದೂ, ಕಳಂಕಮಿಶ್ರವಾದದ್ದನ್ನು ಪರಿಶುದ್ಧವೆಂದೂ, ಅರ್ಧಪಕ್ವವಾದ ಕಲಾಚಾತುರ್ಯವನ್ನು ಪೂರ್ಣಸಂಸ್ಕೃತಕಲೆಯ ಪರಮಪದವೆಂದೂ ಹೇಳಲಾದೀತು ?" "ನಮ್ಮದು, ಆದದ್ದರಿಂದ ಹೆಮ್ಮೆಯದು ಎಂಬ ದುರಭಿಮಾನವನ್ನು ಬಿಡೋಣ. ತಾರತಮ್ಯವನ್ನು ಬಲ್ಲ ವಿಮರ್ಶೆಯನ್ನು ಅಭ್ಯಾಸ

ಮಾಡೋಣ. ನೆರೆಮನೆಯ ಮಕ್ಕಳು ಮನೆಯ ಮಕ್ಕಳಿಗಿಂತ ಮುದ್ದಾಗಿದ್ದರೆ, ಹೊಟ್ಟೆ ಉರಿದರೂ, ಅವರ ಚೆಲುವನ್ನು ಒಪ್ಪಿಕೊಳ್ಳೋಣ. ಆಗ್ಗೆ ನಮಗೆ ವಿನೀತರಲ್ಲಿ ಮರ್ಯಾದೆ ಹುಟ್ಟುವುದು. ನಿಜವಾದ ಸೌಂದರ್ಯದ ಸರಿಯಾದ ಪರಿಜ್ಞಾನವುಂಟಾಗುವುದು." "ಗಾಳಿ ಬಂದು ತೂರುವಾಗ ಜೊಳ್ಳಾಗಿರುವುದು ಹೋಗುತ್ತದೆ; ಅದಕ್ಕಾಗಿ ವ್ಯಥೆಪಡಬೇಕಾದುದಿಲ್ಲ. ಯಾವುದನ್ನೂ ತೂಕಮಾಡಿ, ವಿಮರ್ಶೆಮಾಡಿ, ಯಾವುದು ಉತ್ತಮ, ಯಾವುದು ಉತ್ತಮವಲ್ಲ, ಯಾವುದು ಹಿತ, ಯಾವುದು ಅಹಿತ, ಎನ್ನುವುದನ್ನು ವಿಚಾರಮಾಡಿ, ಹಿರಿಯರಿಗೂ ದ್ರೋಹಮಾಡದೆ, ನಮಗೂ ಕೆಟ್ಟದಾಗದೆ ಇರುವಂತೆ ಮುಂದಿನ ಏಳಿಗೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಹೇಗೆ ತೀರ್ಮಾನಮಾಡಿದರೂ ಒಪ್ಪತಕ್ಕದ್ದಾಗಿದೆ." "ಶ್ರೀ"ಯವರ ಸೂಕ್ತಿಗಳಲ್ಲಿ ನನಗೆ ಅತಿ ಮುದ್ದಾದುದು ಇದು: "ದೋಷಗಳಮೇಲೆ ಎಡವಿ ಎಡವಿ ಬೀಳುವ ನನಗೆ ಯಾವ ಬ್ರಹ್ಮರಾಕ್ಷಸನು 'ಸ್ವಲ್ಪಕ್ಕೆ ತೃಪ್ತನಾಗಬೇಡ'— 'ಅಸಂತೋಷಃ ಶ್ರಿಯೋ ಮೂಲಃ' ಎಂದು ಕಿವಿಯಲ್ಲಿ ಊದಿ ಹೋದನೋ ಕಾಣೆ" ಹೀಗೆ ಯಾವ ವಿಷಯವನ್ನಾದರೂ ಘನವಾದೊಂದು ಅಳತೆಗೋಲಿನಿಂದ ಅಳೆಯಬೇಕೆಂದು ಅವರ ಮನಸ್ಸಿನಲ್ಲಿ ಪ್ರಬಲೇಚ್ಛೆ ತಾಂಡವವಾಡುತ್ತಿದ್ದರೂ, ಪ್ರಾಪಂಚಿಕಾಸಕ್ತಿಗಳ ದೆಸೆಯಿಂದ, ಯಾವುದೋ ಕ್ಷಿಪ್ರ ಫಲಸಾಧನೆಗಾಗಿ, ಅವರು ದಾಕ್ಷಿಣ್ಯಕ್ಕೆ ಶರಣುಬೀಳುತ್ತಿದ್ದರು. ಆಗಾಗ ಅವರ ವದನದಿಂದ, ಪೂರ್ವಾಪರ ವಿರುದ್ಧವೆಂದು ತೋರುವ, ಮನಪೂರೈಸಲಾಗದ ಹೇಳಿಕೆಗಳೂ, ಅಸಮರ್ಪಕ ಅಭಿಮತಗಳೂ ಹೊರಬರುತ್ತಿದ್ದುವು. ಈ ಕೆಲವನ್ನು ಗಮನಿಸಿ. "ಪಂಪ ರನ್ನ ಕುಮಾರವ್ಯಾಸ ಷಡಕ್ಷರಿ ಮುಂತಾದ ಕನ್ನಡಸಾಹಿತ್ಯ ರತ್ನಗಳನ್ನು ನೀವು ಕೇಳಿದ್ದೀರಿ." "ಹಿಂದಿನ ಕನ್ನಡಸಾಹಿತ್ಯದಲ್ಲಿ ಏನಿದೆ? ನಾನೂ ಮೂವತ್ತುವರ್ಷ ಸಂತತವಾಗಿ ಓದಿ ನೋಡಿದ್ದೇನೆ." "ಸಂಸ್ಕೃತ ಕನ್ನಡವನ್ನು ಕೊಚ್ಚಿಹಾಕಿದ ಹಾಗೆ." "ನಮ್ಮ ದಿವ್ಯ ಸಂಸ್ಕೃತವಿದೆ. ಅದರಿಂದ ಹೀರಬಹುದಾದ, ತಂದು ಬೀರಬಹುದಾದ ತಿರುಳು ಅಪಾರವಾಗಿದೆ, ಅನಂತವಾಗಿದೆ." "ವಿಮರ್ಶೆಯ ತಾರತಮ್ಯ ಜ್ಞಾನವಿಲ್ಲದ ಅತಿ ಶ್ಲಾಘನೆ ಬೇಡ." "'ಪ್ರಭುಲಿಂಗ ಲೀಲೆ' ಕನ್ನಡಸಾಹಿತ್ಯದಲ್ಲಿ ಅತ್ಯುತ್ತಮವಾದ ಕಾವ್ಯಗಳಲ್ಲಿ ಒಂದಾಗಿದೆ." "ಕನ್ನಡ ನಾಡಿನ ಭಾರವನ್ನು ಹೊತ್ತು ಮೈಸೂರು ನಿಂತಿದೆ, ನಮ್ಮ ನಾಲ್ವಡಿ ಕೃಷ್ಣನ

ಮೈಸೂರು!" "ಅಂದು ಚಕ್ರವರ್ತಿಯ ಆಶೀರ್ವಾದ; ಇಂದು ನಮ್ಮ ನ್ನಾಳುವ ರಾಜರ್ಷಿಗಳ ಉದಾರಪೋಷಣೆ; ಕನ್ನಡ ಗೆದ್ದೇ ಗೆಲ್ಲುವುದು." "ಈಗ ದೈವಯತ್ನದಿಂದ ಲಭಿಸಿರುವ ಇಂಗ್ಲಿಷಿನ ಶಿಕ್ಷೆಯಲ್ಲೂ, ಇಂಗ್ಲಿಷಿನ ಪೋಷಣೆಯಲ್ಲೂ, ಅದನ್ನು ಬೆಳೆಸಬೇಕು." "ಇಂಗ್ಲಿಷ್ ಸಾಹಿತ್ಯವೇ ಸಂಸ್ಕೃತ ಸಾಹಿತ್ಯದಿಂದ ನಮ್ಮ ಕಾವ್ಯಮಾಲೆಗೆ ಇಳಿದಿರುವ ದೋಷಗಳನ್ನು ಪರಿಹಾರಮಾಡಬೇಕು." "ನಾಯಕನನ್ನು ಬೆನ್ನುಹತ್ತಿ 'ಜಯ'ವನ್ನು ಬಯಸುವವರು ಪ್ರತಿನಾಯಕನ ದೃಷ್ಟಿಯಿಂದ ಅವನ ಅಪಜಯವನ್ನು ನೋಡಬಾರದೇಕೆ?" "'ಶಾಕುಂತಲ' ರುದ್ರ ನಾಟಕವಾಗಿಯೇ ಪರಿಣಮಿಸಬಹುದಾಗಿತ್ತಲ್ಲವೆ?"

"ಇವಳ ಸೊಬಗನವಳು ತೊಟ್ಟು,
ನೋಡ ಬಯಸಿದೆ ;
ಅವಳ ತೊಡಿಗೆ ಇವಳಿಗಿಟ್ಟು
ಹಾಡ ಬಯಸಿದೆ."

ಈ ತರದ ನಿಷ್ಠುರ ವಚನ, ತೀವ್ರ ಪ್ರತಿಪಾದನೆ, ಅಸಮಂಜಸ ತತ್ತ್ವ, ವಿಚಾರಪೂರಿತವಲ್ಲವೆಂದು ತೋರುವ ಹಳೆಯ ನಂಬಿಕೆ, ವಿಕಟಾಪೇಕ್ಷೆಗಳನ್ನು, ತಮ್ಮದೇ ಆದೊಂದು ಔದ್ಧತ್ಯದಲ್ಲಿ ಅವರು ತುಂಬಿದ ಸಭೆಯೆದುರು ಕಂಠೋಕ್ತವಾಗಿ ಘೋಷಿಸುತ್ತಿದ್ದರು. ಅದರಿಂದ ಜನ, ಜನತೆ ಸಿಟ್ಟಾಗುತ್ತಿದ್ದುದು ಅನಪೇಕ್ಷಿತವಾದರೂ ಅನಿವಾರ್ಯವಾಯ್ತು. "ಶ್ರೀ"ಯವರ ಜೀವನಲಾಂಛನ ಗುರಿ ಗೈಮೆಯೆಲ್ಲವನ್ನೂ ಚೆನ್ನಾಗಿ ಬಲ್ಲವರನ್ನು ಈ ಬಗೆಯ ಹೇಳಿಕೆಗಳು ಎಂದಿಗೂ ಹಿಂಸಿಸುತ್ತಿರಲಿಲ್ಲ. ಸಮಸ್ತ ಸಂಗತಿಗಳ ಸೂಕ್ಷ್ಮ ಪರಿಚಯ, ಅದರಿಂದ ತಾನಾಗಿ ಉದ್ಭವಿಸುವ ಔದಾರ್ಯ, ಇಲ್ಲದವರಿಗಾದರೋ ಅವು ಸಹಜವಾಗಿ ಅಸಹನೀಯ, ಅತಿ ಸಂಕಟಕರ.

ದಿವಸ ಕಳೆದ ಹಾಗೆಲ್ಲ, ಗುರುವರ್ಯರಿಗೂ ಚಿಂತೆ ಬೆಳೆಯುತ್ತ ಬಂತು. ತಾವು ಹೇಳಿದುದನ್ನು ಕೇಳದವರು ಹೆಚ್ಚಾದರು; ತಮ್ಮ ಯೋಜನೆಗಳನ್ನು ಒಪ್ಪದವರು ಬಲಗೊಳ್ಳುತ್ತ ಬಂದರು; "ಕನ್ನಡಿಗರು ಒಡೆದಿದ್ದಾರೆ, ಒಡಕು ಬೆಳೆಯುತ್ತಲೂ ಇದೆ" ಎಂಬ ಕೊರಗು ಅವರಲ್ಲಿ ವೃದ್ಧಿಯಾಯ್ತು. ಅಲ್ಲಿಂದ ಬೇಗ ಬೇಗ, ಅಸಮಾಧಾನ, ಅಪನಂಬಿಕೆ, ಅಧೈರ್ಯ, ಖಿನ್ನತೆ, ಅಶುಭವೀಕ್ಷಣೆ, ಹತಾಶೆಗಳು ಒಂದೊಂದಾಗಿ ಧಾವಿಸಿ ಕವಿದುಬಂದುದರಿಂದ,

"ಶ್ರೀ ಯವರ ಕಟ್ಟಕಡೆಯ ಘಟ್ಟ ನಿಸ್ಸಂಶಯವಾಗಿ ವಿಷಾದಮಯ ವಾಯ್ತು. ವಿಷಾದಕ್ಕೆ ಕಾರಣವಿರಲಿಲ್ಲ, ಖಂಡಿತ: ಕನ್ನಡ ಜನತೆಯಲ್ಲಾಗಲೀ ಕರ್ನಾಟಕ ಮುಖಂಡರಲ್ಲಾಗಲೀ "ಶ್ರೀ"ಯವರನ್ನು ಕುರಿತು ಇದ್ದ ಪೂಜ್ಯಭಾವಕ್ಕೆ ಯಾವಾಗಲೂ ಎಳ್ಳಷ್ಟೂ ಕುಂದಿರಲಿಲ್ಲ, ಕುಂದು ಬರುವಂತಿರಲಿಲ್ಲ. "ಶ್ರೀ"ಯವರು ಕೈಗೊಂಡ ಮಹಾ ಉದ್ಯಮಗಳಲ್ಲಿ ಮುಖ್ಯವಾದುವೆಲ್ಲ ರೂಪುರೇಖೆಯೊಡಗೂಡಿ ಸಿದ್ಧಿಪಡೆದಿದ್ದುವು. ವಸ್ತುಸ್ಥಿತಿ ಹೀಗಿದ್ದರೂ "ಶ್ರೀ"ಯವರಿಗೆ ಯಾವುದೋ ಅವರ್ಣನೀಯ ವ್ಯಾಕುಲ, ತಳಮಳ, ನಿರಾಶೆ. ಕನ್ನಡ ಸಾಹಿತ್ಯ ಪರಿಷತ್ತಿನ ಆಡಳಿತ ಸೂತ್ರಗಳನ್ನು ಅವರು ಬಿಟ್ಟುಕೊಡುವಾಗ ಪ್ರಸಂಗ ಬಹು ಕಹಿಯಾದ್ದನ್ನು ಅನೇಕರು ಮರೆಯಲಾರರು. ಆಗ ಅವರು ಉದ್ಗಾರಗೈದ ಚರಮವಾಕ್ಯಗಳು, "ಬೀಳ್ಕೊಡಿಂ, ಎನಗೆ ಜೀವಾನಂದಮಾಗಿರ್ದರೆಲ್ಲರ್ ಬೀಳ್ಕೊಡಿಂ,-ನಾನ್ ಪೋಗಿ ಬರ್ಪೆನ್!" ಅವರೇ ಸೃಷ್ಟಿಸಿದ, ಹತಾತ್ಮ ಅಶ್ವತ್ಥಾಮನ ಕಟ್ಟಕಡೆಯ ನಿಟ್ಟುಸಿರು! ಅವರ ಮೊದಲಿನ ಮಾತುಗಳು, "ನನ್ನ ಕನ್ನಡದ ಉರುಬಿನಲ್ಲಿ ಕಾವು ನೋವುಗಳಿಗೆ ಎಡೆಕೊಟ್ಟದ್ದೇನೆ. ಕನ್ನಡಕ್ಕಾಗಿ, ಕನ್ನಡ ನಾಡಿಗಾಗಿ. ಹಟಕ್ಕಲ್ಲ, ನಾನು ಕಂಡ ದಿಟಕ್ಕಾಗಿ. ಮರೆತುಬಿಡಿ, ಮನ್ನಿಸಿಬಿಡಿ" ಸೌಮ್ಯವಾಗಿದ್ದುವು, ಸೌಜನ್ಯಪೂರಿತವಾಗಿದ್ದುವು. "ಶ್ರೀ" ಯವರ ನಿಶ್ಚಯವ್ಯಕ್ತಿತ್ವದ ಪರಿಮಳ ಪುಷ್ಪಗಳಾಗಿದ್ದುವು; ಅವು ಬೇರೆಯಾಗುವ ಅಪ್ರಿಯ ಸಂದರ್ಭವನ್ನು ಪ್ರಿಯಗೊಳಿಸುವ ಮಂತ್ರಶಕ್ತಿಯ ಪ್ರಶಾಂತವಾಣಿ. ಆದರೆ ಚಂಡಾಲ ಮುಂಗೋಪಿ, ಅದೃಷ್ಟಹೀನ ಅಶ್ವತ್ಥಾಮನ, ಆತ್ಮಹತ್ಯೆಯ ಅಂಧಕೂಪಕ್ಕೆ ಬೀಳುತ್ತಿರುವ ಅಶ್ವತ್ಥಾಮನ, ಅಂತಿಮ ಅಪಲಾಪ! ಆಗ ನಾನು ಮನಗಂಡೆ: ವಿಧಿಯೆಂಬುದು ಬೇರೊಂದಿಲ್ಲ; ನಮ್ಮ ನಮ್ಮ ಸ್ವಭಾವ, ಆಲೋಚನೆ, ಹವ್ಯಾಸಗಳೇ ನಮನಮಗೆ ವಿಧಿ, ನಮ್ಮ ನಮ್ಮ ನೋವು ನೆಮ್ಮದಿಗಳಿಗೆ ಕಾರಣ; ಅದರಲ್ಲಿಯೂ ಮುಖ್ಯವಾಗಿ ಮೇಲ್ಮಟ್ಟದ ಮನುಷ್ಯವ್ಯಕ್ತಿಗಳಿಗೆ.

"ಶ್ರೀ"ಯವರ ವ್ಯಸನಕ್ಕೆ ತಾವು ಮನಸ್ಸಿನಲ್ಲಿ ಧ್ಯಾನಿಸಿಕೊಂಡ ಕನ್ನಡಲೋಕ ಮೂರ್ತಿವತ್ತಾಗಲಿಲ್ಲವೆಂಬ ಅತೃಪ್ತಿ, ತಮ್ಮ ನಾಯಕತ್ವದಲ್ಲಿ ಕನ್ನಡಿಗರಿಗೆ ಶಂಕೆಯುಂಟಾಯ್ತೆಂಬ ಅಶಾಂತಿ, ಮತ್ತು ಅವರ ಆತ್ಯಾವೇಶದ ಚಿತ್ತವೃತ್ತಿ ಪ್ರಧಾನ ಹೇತುಗಳು. ಇನ್ನೊಂದು ಪ್ರಬಲ ನಿಮಿತ್ತವಿತ್ತು.

ಅದಾವುದೆಂದರೆ, ಸಾಟಿಯಿಲ್ಲದ ಸಮರ್ಥ ವಾಗ್ಮಿಗಳಾಗಿದ್ದುದೇ ಅಲ್ಲದೆ "ಶ್ರೀ"ಯವರು ಕ್ರಮೇಣ, ಅಪ್ರಯತ್ನಿತವಾಗಿ, ಬಹುಶಃ ಅವರಿಗೆ ಗೊತ್ತಿರದ ರೀತಿಯಲ್ಲಿ, ಕಸಬುಗಾರ ಭಾಷಣಗಾರರಾಗಿಬಿಟ್ಟುದು. "ಶ್ರೀ"ಯವರ ಗುಣವೈಶಿಷ್ಟ್ಯ, ಮಹತ್ಪ್ರಾಥಿಮೆ, ಮುಖ್ಯ ವರ್ಚಸ್ಸನ್ನು ಚಿತ್ರಿಸಿಕೊಳ್ಳುವಾಗ, ಅವರ ಇತರ ಗುಣಗಳೂ ಶೀಲ ಸೌಜನ್ಯಗಳೂ ನಡೆ ನುಡಿಗಳೂ ಹಿನ್ನೆಲೆಗೆ ಸರಿದು; ಅವರ ವೈಯಕ್ತಿಕ ಜೀವನ, ಗ್ರಂಥಪಠಣ, ಸುಖ ಸಂಕಥೆಗಳೆಲ್ಲವೂ ಗೌಣವಾಗಿಬಿಟ್ಟು; ಅವರ ವೇದಿಕೆಯ ಜೀವನವೇ ಎತ್ತರವೂ ಪರಿಪುಷ್ಟವೂ ಆಗಿ ಕಣ್ಣುಮುಂದೆ ನಿಲ್ಲುತ್ತದೆ. ಶ್ರೀಯುತ ಆಲೂರು ವೆಂಕಟರಾಯರು ಒಮ್ಮೆ ಮಾಡಿದ ರಸಪ್ರಾಸ ಸತ್ಯ: "ಶ್ರೀಕಂಠಯ್ಯನವರ 'ಕಂಠಶ್ರೀ' ಇತರರಿಗಿಲ್ಲ." "ಶ್ರೀ"ಯವರು ವಾಗ್ಶ್ರೀಯುತರು, ವಾಕ್ಕೋವಿದರು, ವಾಗ್ವೈಭವಶಾಲಿಗಳು. ವಾಗ್ಮಿತೆ ಯಲ್ಲಿ ಅವರ ಐಹಿಕ ಸಾಹಸಗಳ ಚರಿತ್ರೆ ಅಡಗಿತ್ತು; ಅವರ ಆತ್ಮದ ಕುರುಹು ಪ್ರತಿಬಿಂಬಿಸಿತ್ತು. ವಾಗ್ವ್ಯವಸಾಯದ ವಿಚಾರದಲ್ಲಿ ನಾನೊಬ್ಬ ನಿರ್ಲಜ್ಜೆಯ ಸಂದೇಹಿ; ಅದು ವ್ಯರ್ಥವೆಂದು—ತಪ್ಪೊ ನೆಪ್ಪೊ—ಬಲವಾಗಿ ನಂಬಿರುವವರಲ್ಲಿ ನಾನೊಬ್ಬ. ಆದರೆ "ಶ್ರೀ"ಯವರನ್ನು ಸ್ಮರಿಸಿಕೊಂಡಾಗ ಭಾಷಣದ ಸ್ವರೂಪ ಪ್ರಭಾವ ಕಾರ್ಯಸಾಧನೆ ಮಹತ್ತರವೆಂದು ಬೋಧೆ ಯಾಗಿ, ನನ್ನ ಸಂದೇಹ ಶಿಥಿಲವಾಗುತ್ತದೆ; ಮಾತಿನ ಶಕ್ತಿಯೂ ದೈವ ದತ್ತ, ಪರಿಣಾಮಕರವಾದ ಮಾನವ ಶಕ್ತಿಗಳಲ್ಲಿ ಒಂದು, ಎಂದು ಒಪ್ಪಲೇ ಬೇಕಾಗುತ್ತದೆ. ಇದು ಗುರುವೆಂಬ ವಾಂಛಿಲ್ಯವಲ್ಲ; ಕ್ಲುಪ್ತ ಮರ್ಯಾದೆಯ ಹೊಗಳಿಕೆಯಲ್ಲ: ತಾರತಮ್ಯವನ್ನರಿತ ಪರಿಶೀಲನೆಯ ಪ್ರಸಾದ. ಆ ವಾಗ್ವಿಜೃಂಭಣೆಯನ್ನು ಇನ್ನೆಲ್ಲಿ ಕಾಣೋಣ? ಆ ಉಚ್ಚಾರಣೆ, ಆ ಅವ ಧಾರಣೆ; ಆ ಲಯ, ಆ ಗತಿ: ಆ ಝುರಿ, ಆ ಜಾಣ್ಮೆ; ಆ ಪದವಿನ್ಯಾಸ ಕಲೆ, ಆ ಆನಂದಲಹರಿಗಳನ್ನು ಇನ್ನೆಂದು ಅನುಭವಿಸೋಣ? ಪ್ರಥಮ ಶ್ರೇಣಿಯ ಭಾಷಣಕಾರನಿಗೆ ಇರಬೇಕಾದ ಶಾರೀರಿಕ ಮಾನಸಿಕ ಗುಣಮಣಿ ಗಳೆಲ್ಲವೂ "ಶ್ರೀ"ಯವರಲ್ಲಿ ನಿಬಿಡವಾಗಿ, ಅಪೂರ್ವ ಅಲಂಕರಣದಲ್ಲಿ ಕೂಡಿಕೊಂಡಿದ್ದುವು! ದುಂಡು ದುಂಡಾದ, ಮಧ್ಯ ಎತ್ತರದ, ಭವ್ಯ ದೇಹಾ ಕೃತಿ; ಅಗಲವಾದ, ನಸುಗೆಂಪಿನ, ಗಂಭೀರ ಹಣೆ; ಉಬ್ಬಿದ ತಿಳಿಗೆಂಪಿನ ಲವಲವಿಕೆಯ ಕೆನ್ನೆಗಳು; ತೀಕ್ಷ್ಣವೂ ಆಲೋಚನಾಪೂರಿತವೂ

ಅತ್ಯುತ್ಸಾಹಸೂಚಕವೂ ನಗುವನ್ನು ಸೂಸುವುದೂ ಆದ ಉಜ್ಜ್ವಲ ಕಾಂತಿಯ ಕಣ್ಣುಗಳು; ಸ್ವಲ್ಪ ಸಣ್ಣದಾದರೂ ಮುಖಕ್ಕೆ ಮುದ್ದಾಗಿ ಹೊಂದಿಕೊಂಡ ನಾಸಿಕ; ಮಂದಸ್ಮಿತದಿಂದ ಕೂಡಿದ್ದರೂ ದೃಢತೆ ಕಾಠಿಣ್ಯ ಗಳನ್ನು ವ್ಯಕ್ತಪಡಿಸುವ ಸ್ಪಷ್ಟ ತುಟಿಗಳು; ಕೆಳಗಲ್ಲದ ಹಿಂಬದಿಯಿಂದ ಮೇಲಕ್ಕೆದ್ದು, ಕೆಳಗುಳಿಯೊಂದರಿಂದ ಕೊಂಚ ಇಬ್ಬಗೆಯಾದ ನುಣ್ಣನೆಯ ರಂಜಕಗಲ್ಲ; ಎಲ್ಲಕ್ಕಿಂತ ಮಿಗಿಲಾಗಿ, ಲೋಚನಾಗ್ರದಿಂದ ಅವುಡಿನವರೆಗೆ ಇಳಿದುಬಂದು, ಕವುಳುಗಳನ್ನು ಮೂಗು ಬಾಯಿಗಳಿಂದ ಪ್ರತ್ಯೇಕಿಸುತ್ತ, ಗೆಲವಿನಿಂದ ಕೂಡಿದ ಎರಡು ಗೀರುಗಳು; ಒಟ್ಟನಲ್ಲಿ ಒಂದು ಸಾರಿ ನೋಡಿ ದರೆ ಸಾಕು, ಪ್ರೇಕ್ಷಕನ ಚಿತ್ತಭಿತ್ತಿಯಲ್ಲಿ ಕೊರೆದು ನಿಲ್ಲುವ, ಅಂಬಾರಿ ಆನೆ ಯಂದದ, ಠೀವಿಯ ಮುಖಮುದ್ರೆ; ಏರಲೂ ಬಲ್ಲ, ಇಳಿಯಲೂ ಬಲ್ಲ, ಇಂಪಾದ, ಕುಗ್ಗದ ದನಿ; ಆಗಾಗ ಮೇಲಕ್ಕೆದ್ದು, ಪ್ರತಿಪಾದಿಸುವ ಅಂಶ ವನ್ನು ಒತ್ತಿ ಹೇಳುವ ಭಂಗಿಯನ್ನು ತಾಳುವ, ಉಚಿತಾಕಾರದ, ದುಂಡಾದ ಕೈಗಳು; ತಾವರೆಯಂತೆ ಕೆಂಪಾಗಿ ಕೋಮಲವಾದ ಅಂಗೈ; ಹಾಗೆಯೇ ರಕ್ತ ಸೋರುತ್ತದೆಯೋ ಎನ್ನುವಂತೆ ಕಾಣಿಸುತ್ತಿದ್ದ ಶುಭ್ರ ಸುಂದರವಾದ ಹೆಜ್ಜೆಗಳು :—ಇನ್ನಾವ ಶುಭಲಕ್ಷಣವನ್ನು ಬಯಸಬೇಕು? ಆ ಅಂಗೈ ಆ ಅಂಗಾಲನ್ನು ಹತ್ತಿರ ಕುಳಿತು ದರ್ಶಿಸಿದವನು ತಕ್ಕಷ್ಟುಮಟ್ಟಿಗೆ ಧನ್ಯ; ಏತಕ್ಕೆಂದರೆ ಅವುಗಳ ಮೇಲೆ ನಿಷ್ಕಳಂಕಿಯ, ಸಂಯಮಶಾಲಿಯ, ತಪಸ್ವಿಯ, ಗುರುತು ಸ್ವಚ್ಛವಾಗಿ ಒತ್ತಿದಂತಿದ್ದಿತು. ಅದೇಂತೊ, ಅವನ್ನು ಈಕ್ಷಿಸಿದೊಡನೆ ನನಗೆ—ಗುರುವಿಗೆ ಆ ದೇವತೆ ಈ ದೇವತೆಯಲ್ಲಿ ತಾತ್ಸಾರ, ತಿರಸ್ಕಾರವಿದ್ದುದು ನನಗೆ ಗೊತ್ತಿದ್ದರೂ—ಹಠಾತ್ತು ಲಲಿತಾ ಸ್ತೋತ್ರದ ಕೆಲವು ವಾಕ್ಯಗಳು ಮಿಂಚಿ ಮಾಯವಾಗುತ್ತಿದ್ದುವು. ಅದು ಹಾಗಿರಲಿ, ವೇದಿಕೆಯಮೇಲೆ ಸಾವಧಾನದಲ್ಲಿ ವಿಹರಿಸುತ್ತ, ಉಪದೇಶಗೈಯಲು ಸರ್ವ ಯೋಗ್ಯವಾದ ವ್ಯಕ್ತಿತ್ವವನ್ನು ಪಡೆದಿದ್ದರು “ಶ್ರೀ”ಯವರು. ಐದು ನಿಮಿಷದ ಔಪಚಾರಿಕ ಪೀಠಿಕೆಯಾಗಲೀ ಮೂರು ಘಂಟೆಯ ದೀರ್ಘ ವ್ಯಾಖ್ಯಾನವಾಗಲೀ ಅದಕ್ಕೆ ತಮ್ಮ ಅಳವು ಆಪುಗಳೆಲ್ಲವನ್ನೂ ಪರಿಶುದ್ಧಾಂತಃ ಕರಣದಿಂದ ನೀಡಿ, ಅದೇ ತಾವು ತಾವೇ ಅದು ಎಂಬ ಆತ್ಮೀಯತೆಯಿಂದ, ಅದನ್ನು ಎಸಗುವ ಚಿತ್ತನೈರ್ಮಲ್ಯ, ಮನೋದಾರ್ಢ್ಯ, ಹೃದಯಾವೇಶ ಅವರಲ್ಲಿ ತುಂಬಿತ್ತು. ತಕ್ಕ ಸಾಧನ ಸಾಮಗ್ರಿಗಳನ್ನು ಸಂಪಾದಿಸಿಕೊಳ್ಳುವ,

ಅವನ್ನು ಸದಾ ಹರಿತವಾಗಿಟ್ಟುಕೊಳ್ಳುವ, ನಿಷ್ಠೆಯೂ, ಆ ಕೃಷಿಯಲ್ಲಿಯೇ ತಮ್ಮ ಜೀವನದ ಪ್ರಧಾನ ಸೌಖ್ಯವೆಂಬ ಪ್ರತಿಷ್ಠೆಯೂ ಇದ್ದುವು. ಅಷ್ಟೇಕೆ: "ಶ್ರೀ"ಯವರು ಭಾಷಣವನ್ನು ಮಾಡುತ್ತಿರಲಿಲ್ಲ, ಭಾಷಣವನ್ನು ಬಾಳುತ್ತಿದ್ದರು. ಅವರದೊಂದು ಉಪನ್ಯಾಸವೆಂದರೆ ಕಿವಿಯಲ್ಲಿ ಕೇಳಲು ಮಾತ್ರ ಮಂದಿ ಹೋಗುತ್ತಿರಲಿಲ್ಲ; ಕಣ್ಣು ಕಿವಿ ಚಿತ್ತ ಹೃದಯ ಮನಸ್ಸು ಆತ್ಮವೆಲ್ಲಕ್ಕೂ ಹಬ್ಬಹೊಂದಿಸಿಕೊಳ್ಳಲು ಹಾತೊರೆಯುತ್ತಿದ್ದರು. ಸಭೆಯ ನಿರೀಕ್ಷೆಯನ್ನು ಸಾಧಾರಣವಾಗಿ ಮೀರಿಸುತ್ತಿದ್ದರಲ್ಲವೆ "ಶ್ರೀ"ಯವರು ? ಉಪಾಧ್ಯಾಯನಿಗೂ ಭಾಷಣಕಾರನಿಗೂ ಬೆನ್ನುಹತ್ತಿದ ಭೇತಾಳವೆಂದರೆ, ಉಪನ್ಯಾಸದಲ್ಲಿ ತಲ್ಲೀನನಾಗಕೊಡದೆ, ತಿರುತಿರುಗಿ ಉಲ್ಬಣವಾಗಿ, ನಾಚಿಕೆ ಅಂಜಿಕೆಗಳನ್ನು ಹುಟ್ಟಿಸುವ, ಹುಟ್ಟುತ್ತಲೇ ಬಂದು ರೂಢಮೂಲವಾದ, ಹಾಯಾಗಿರಗೊಡದ ಆತ್ಮಪರಿಜ್ಞಾನ. ತಾನಾರು, ತಾನೆಲ್ಲಿರುವೆ, ತಾನೇನನ್ನಾಡುತ್ತಿರುವೆ, ಎಂಬ ಅರಿವನ್ನು ಎಷ್ಟರಮಟ್ಟಿಗೆ ಸ್ಮೃತಿಯಲ್ಲಿಟ್ಟಿರಬೇಕು, ಎಷ್ಟರಮಟ್ಟಿಗೆ ಸ್ಮೃತಿಯಿಂದಟ್ಟಿರಬೇಕು—ಇದು ವಾಗ್ಮಿಯನ್ನು ತಲ್ಲಣಗೊಳಿಸುವ ತೊಡಕು. ಇದನ್ನು ಬಿಡಿಸುವುದರಲ್ಲಿ ಪ್ರತ್ಯಕ್ಷವಾಗುವ ನೈಪುಣ್ಯ ವಾಕ್ಪಟುವಿನ ವರ್ಗವನ್ನು ಸ್ಥಾಪಿಸಲು ಉತ್ಕೃಷ್ಟ ಸಲಕರಣೆ. "ಶ್ರೀ"ಯವರಿಗಾದರೋ, ಅದು ಸಮಸ್ಯೆಯೇ ಆಗಿರಲಿಲ್ಲ. ಕಾರ್ಯಕ್ರಮದ ಆರಂಭದಲ್ಲಿ ಕೊಂಚ ಕೊಂಚ ಆ ಕಷ್ಟ ತೋರಿಬಂದಂತಿದ್ದರೂ, ಬಹುಬೇಗ ಅವರು ಸಭೆ, ಸನ್ನಿವೇಶ, ಸಮಯ, ವಿಷಯ, ತಾವು ಎಲ್ಲವನ್ನೂ ಸಮತೂಕದ ಸಂಯೋಜನೆಯಲ್ಲಿ ಹದಗೂಡಿಸಿ, ಕೃತಕೃತ್ಯರಾಗುತ್ತಿದ್ದರು.

"ಶ್ರೀ"ಯವರೊಬ್ಬ ಆಶು ಭಾಷಣಕಾರರು; ಪೂರ್ವಸಿದ್ಧತೆಯಾವುದೂ ಅವರಿಗೆ ಬೇಡವಾಗಿತ್ತು; ವೇದಿಕೆಯನ್ನ ಅವರು ಏರಿದೊಡನೆಯೇ ವಾಗ್ದೇವಿ ಅವರ ನಾಲಗೆಯಿಂದ ನರ್ತಿಸುತ್ತಿದ್ದಳು' ಎಂಬ ಭಾವನೆ ಹಲವರಲ್ಲಿತ್ತು; ಈಗಲೂ ಇರಬಹುದು. ಅದು ಒಪ್ಪಲಾಗದ, ಸತ್ಯಾಂಶದಿಂದ ದೂರವಾದ, ಭಾವಾತಿರೇಕದ ನಂಬಿಕೆ. ನಯನಾಕರ್ಷಕ ವ್ಯಕ್ತಿಗಳು, ಮಾಗಿ ಹಣ್ಣಾದ ಪಾಂಡಿತ್ಯದಿಂದ ಯಥೇಷ್ಟರಾದ ವಿದ್ವಾಂಸರು, ಪೆಂಪಿನ ಸುರಿತ ಶಿಕ್ಷಕರು, ನಾಡಿನಲ್ಲೆಲ್ಲ ಅತ್ಯಂತ ಪೂಜ್ಯರು : ಹಾಗಿದ್ದರೂ "ಶ್ರೀ"ಯವರು ಸಾರ್ವಜನಿಕೋಪನ್ಯಾಸದ ಕರೆಯಾಗಲೀ ಪಾಠಪ್ರವಚನದ

ಘಂಟೆಯಾಗಲೀ ಪೂರ್ವ ಪುಷ್ಕಳ ಸಿದ್ಧತೆಯಿಲ್ಲದೆ ಮಂದಿರದೊಳಗೆ ಕಾಲಿಡು ತ್ತಿರಲಿಲ್ಲ. ಕೊನೆಗೆ ಮೋಟಾರುಗಾಡಿಯಲ್ಲಿ ಸಭೆಗೆ ಬರುವಾಗ ಕೂಡ ಪಠ್ಯಪುಸ್ತಕವನ್ನ, ಮೂವತ್ತು ನಲವತ್ತು ಬಾರಿ ಪಾಠಹೇಳಿದ ಪುಸ್ತಕವನ್ನ, ಐವತ್ತು ಬಾರಿ ವ್ಯಾಖ್ಯಾನಿಸಿದ ವಿಷಯವನ್ನ, ಪುನರಾಮರ್ಶಿಸಿಕೊಳ್ಳುವುದು ಅವರ ಅಭ್ಯಾಸ, ಸ್ವಭಾವ, ಅಪೇಕ್ಷೆ. ಹಾಗೆ ಮಾಡಿಕೊಳ್ಳದಿದ್ದರೆ ತಮಗೆ ಧೈರ್ಯವೇ ಬರುತ್ತಿರಲಿಲ್ಲವೆಂದು ಅವರು ನನ್ನೊಡನೆ ಹೇಳಿದುದುಂಟು. ಆ ಸೂತ್ರದ ಒಳಗಣ ಅರ್ಥ ಗೋಚರವಾಗಲು ನನಗೆ ಕೆಲವು ವರ್ಷಗಳು ಬೇಕಾಯ್ತು. ಅಲ್ಲದೆ “ ಶ್ರೀ ” ಯವರು ಮುನ್ನ ನಡಸಿದ ಇಪ್ಪತ್ತು ಇಪ್ಪತ್ತೈದು ಸಂವತ್ಸರಗಳ ಜ್ಞಾನಯಜ್ಞ ಅತ್ಯುತ್ತಮ ಪೂರ್ವಸಿದ್ಧತೆ ಯಲ್ಲವೇ ? ಯಾವೊಂದು ಉಪನ್ಯಾಸವನ್ನಾದರೂ ಅಧಿಕ ಆಸಕ್ತಿಯಿಂದ, ಹೇರಳ ವಿಶ್ವಾಸದಿಂದ, ಏಕಚಿತ್ತದಿಂದ ಎಸಗಬೇಕೆನ್ನುವ ಜಾಯಮಾನ ಅವರದ್ದು. ಭಾಷಣ ಕಾರ್ಯವನ್ನು ಸಪ್ಪೆಯೆಂದಾಗಲೀ, ಹೇಗೋ ಆದ ರಾಯ್ತೆಂದಾಗಲೀ, ಬಲಾತ್ಕಾರದ ಹಂಗೆಂದಾಗಲೀ, ಅವರಾವತ್ತೂ ಭಾವಿಸಿ ದವರಲ್ಲ. ಭಾಷಣವೇ ಅವರ ಬದುಕಾದಂತಿರಲಿಲ್ಲವೆ ? ಅಚ್ಚರಿಯೇನು : ಡೆಮಾಸ್ತನೀಸನಿಂದ ಗೋಖಲೆಯವರೆಗೂ ಯಾವ ದೊಡ್ಡ ಭಾಷಣ ಕಾರನೂ ಸಂಪೂರ್ಣ ಸಜ್ಜಿಲ್ಲದೆ ತನ್ನ ಗೆಯ್ಮೆಗೆ ಕೈಹಾಕಲಿಲ್ಲ, ಕೈಹಾಕ ಲೊಲ್ಲ, ಎಂಬುದಕ್ಕೆ ಆತ್ಮಕಥೆಗಳ ಇಡೀ ಭಂಡಾರವೇ ನಿದರ್ಶನ.

“ ಶ್ರೀ ”ಯವರ ವಿಷಯ ಪ್ರತಿಪಾದನಾಕ್ರಮಕ್ಕೆ ಒಂದು ನೂತನವೂ ವಿಚಿತ್ರವೂ ಆದ ಲಕ್ಷಣ : ವಿಚಾರವಸ್ತುವಿನಲ್ಲಿ ಅಡಕವಾದ ಒಂದಂಶವನ್ನೂ ಬಿಡದೆ ಹೊರಗೆಡಹುವುದರಲ್ಲಿ ಅವರು ನಿಸ್ಸೀಮರು. ಅದನ್ನು ನಾಲ್ಕಾರು ಸಲ ಹೀಗೆ ಜಗ್ಗಿ, ಹಾಗೆ ಎಳೆದು, ಹಿಗ್ಗಲಿಸಿ, ಸಂಕ್ಷಿಪ್ತಗೈದು, ಇತ್ತಲಿಂದ ನೋಡಿ, ಅತ್ತಲಿಂದ ನೋಡಿ, ಪುಷ್ಟಿಗೊಳಿಸುವುದರಲ್ಲಿ ಅವರದು ಒಂದು ಅಸದೃಶ ಕೈವಾಡ. ಸಾಂಸ್ಕೃತಿಕ, ರಾಜಕೀಯ, ಸಾಮಾಜಿಕ, ಧಾರ್ಮಿಕ ಹಿನ್ನೆಲೆಗಳನ್ನು ಅವರು ವಿಶದವಾಗಿ ವಿವರಿಸುತ್ತಿದ್ದ ಕ್ರಮವೂ ನವೀನ ವಾದ್ದು. ಅಲ್ಪದರಲ್ಲಿಯೂ ಸ್ವಲ್ಪದರಲ್ಲಿಯೂ ಅವರಿಗೆ ತಾಳ್ಮೆ ಕಡಮೆ. ಅವರ ಬಾಯಿಂದ ಬರುತ್ತಿದ್ದುದು ಒಂದು ತುಂಡು ಕಾವ್ಯದ ಮೇಲಣ ಲಘು ವಿಮರ್ಶೆಯಲ್ಲ ; ಪ್ರತಿಯೊಂದು ಘಂಟೆಯ ಉಪನ್ಯಾಸವೂ ಸಂಸ್ಕೃತಿಯ, ನಾಗರಿಕತೆಯ, ಒಂದೊಂದು ಜಿಜ್ಞಾಸೆಯಾಗಿರುತ್ತಿತ್ತು. ಸಾಹಿತ್ಯದ ಸವಿ

ಹರ್ಷ, ಶಾಸ್ತ್ರದ ಬುದ್ಧಿ ವಿವೇಕವೆರಡರ ಸಮನ್ವಯ ಅವರ ಅಂತರ್ಯದ ಅಭಿಲಾಷೆ. ಸಾಮಾನ್ಯವಾಗಿ ಅವರು ತಮ್ಮ ಸ್ವಂತ ಅಭಿಮತವನ್ನು ಸ್ಪಷ್ಟವಾಗಿ ಉದ್ಘೋಷಿಸುತ್ತಿರಲಿಲ್ಲ. ಎಲ್ಲೋ ಒಂದು ಸಾರಿ ರೆಪ್ಪೆ ಮಿಟುಕಿಸುವುದರಲ್ಲಿ, ಕೊಂಚ ದನಿ ಎತ್ತರಿಸುವುದರಲ್ಲಿ, ಒಂದು ಪಂಕ್ತಿಯನ್ನೊ ಪದವನ್ನೊ ಪುನರುಚ್ಚರಿಸುವುದರಲ್ಲಿ, ಹಗುರವಾಗಿ ತೇಲಿಸಿ ಅದನ್ನು ಸೂಚಿಸುತ್ತಿದ್ದರು. 'ಇದೊಂದೇ ಸ್ವೀಕರಿಸತಕ್ಕ ದರ್ಶನವೇ? ಇದೇ ಕಟ್ಟಕಡೆಯ ನಿರ್ಧಾರವೇ?'—ಈ ತರದ ನಿಷ್ಪಕ್ಷಪಾತವಾದ, ರಾಗ ರಹಿತವಾದ, ದಟ್ಟವಾದ, ವಿಚಾರವಿಚಕ್ಷಣೆಯನ್ನು ಪ್ರಚೋದಿಸುವುದು, ಪ್ರೋತ್ಸಾಹಿಸುವುದು ಅವರ ಉಪದೇಶದ ಸಾರ, ತಿರುಳು, ಸತ್ವ, ಸ್ವಾರಸ್ಯ. "ಧಿಯೋ ಯೋ ನಃ ಪ್ರಚೋದಯಾತ್", "ನವೋ ನವೋ ಭವತಿ ಜಾಯಮಾನಃ": ಎಂಬುವೇ ಅಲ್ಲವೆ ಈ ಆಧುನಿಕ ಋಷಿಶ್ರೇಷ್ಠರ ಪ್ರಾಣ ಮಂತ್ರ?

ಗುಣಾಧಿಕ್ಯ ಕೆಲವು ಸಾರಿ ಅವಗುಣವಾಗುವುದು ನರನಾಟಕದೊಂದು ಲೀಲೆ. "ಶ್ರೀ"ಯವರೂ ಮನುಷ್ಯಮಾತ್ರರಾದ್ದರಿಂದ ಅವರಲ್ಲೂ ಅಷ್ಟೊಂದು ಹಿತವಲ್ಲದ ಚರ್ಯೆ ಆಗೊಮ್ಮೆ ಈಗೊಮ್ಮೆ ಪ್ರಕಟವಾಗುತ್ತಿತ್ತು. ಭಾಷಣದಲ್ಲಿ ಉದ್ಯುಕ್ತರಾದಾಗ ಕಾಲದ ಆತಂಕವೆಂಬ ನೇಮವನ್ನು ಅವರು ಎಷ್ಟೋ ವೇಳೆ ಧಿಕ್ಕರಿಸಿಬಿಡುತ್ತಿದ್ದರು. ಆ ನಿಮಿತ್ತದಿಂದಲೂ, ಅವರು ಮೊದ ಮೊದಲು ಪಂಪನ "ಆದಿಪುರಾಣ"ವನ್ನು ವಿಲಂಬವಾಗಿ ವಾಚನ—ವ್ಯಾಖ್ಯಾನ ಮಾಡಿದುದರಿಂದಲೂ, ಅವರನ್ನು "ಪುರಾಣಿಕ"ನೆಂದೂ, ಅವರು ಎಸಗುತ್ತಿದ್ದುದು "ಹರಿಕಥೆ"ಯೆಂದೂ ಅಪಹಾಸ್ಯ ಆಡಿದವರುಂಟು. ಅಲ್ಲದೆ, ಮಾತನಾಡುವ ರಭಸದಲ್ಲಿ, ಮಾತುಗಾರಿಕೆಯ ಪರವಶತೆಯಲ್ಲಿ, ಕೆಲವು ಸಾರಿ ಗ್ರಾಮ್ಯ, ಕುಚೋದ್ಯ ಪದಗಳನ್ನು ಬಳಸಲು ಅವರು ಹಿಂದೆಗೆಯುತ್ತಿರಲಿಲ್ಲ. ಒಂದು ಸಲ ಹುಡುಗಾಟಿಕೆಯ 'ಕೊಚ್ಚುಫೈಡ್' ಎಂಬುದನ್ನು ಉಪಯೋಗಿಸಿದಾಗ, ಸಭಾಧ್ಯಕ್ಷ ಪಂಜೆ ಮಂಗೇಶರಾಯರು ನೊಂದುಕೊಂಡು, ಆಕ್ಷೇಪಣೆ ಎತ್ತಲು, "ಶ್ರೀ"ಯವರು ಮನ್ನಣೆಯಾಚಿಸಿದ್ದುಂಟು. ಇನ್ನೊಂದು ಸಂಗತಿ. ಅವರು ಏನನ್ನ, ಎಷ್ಟನ್ನ, ಎಂತು, ನಿರೂಪಿಸಬೇಕೆಂದು ನಿಷ್ಕರ್ಷಿಸಿಕೊಂಡು ಬಂದಿದ್ದರೂ, ಭಾಷಣಕ್ಕೆ ಬರುತ್ತಿರುವಾಗ ಜರುಗಿದ ಒಂದು ಘಟನೆ, ಸರವಿಯ ಒಂದು ನಡತೆ, ಸದಸ್ಯ

ರೊಬ್ಬರ ಒಂದು ಪ್ರಶ್ನೆ, ಅವರ ಮನಸ್ಸಿಗೆ ಹೊಕ್ಕು ಕಲಕಿದರಾಯ್ತು, ಅವರ ಆ ದಿನದ ಭಾಷಣವೆಲ್ಲ ಕಹಿಖಾರದಿಂದ ಮಿಳಿತವಾಗಿ, ಸ್ವಾರಸ್ಯ ಕೆಡುತ್ತಿತ್ತು. ಅವರ ಶಿಷ್ಯರಾದ ನಾವು ಸಭೆಯಲ್ಲಿ ಕುಳಿತು, ನಮ್ಮ ನಮ್ಮಲ್ಲಿಯೇ "ಈ ಹೊತ್ತು ಗುರುಗಳಿಗೆ ರೇಗಿಸುವಂಥಾ ಯಾವ ಅನುಭವವೂ ಆಗಿಲ್ಲದಿರಲಿ, ಆಗದಿರಲಿ, ದೇವರೆ!" ಎಂದು ಪ್ರಾರ್ಥಿಸಿಕೊಳ್ಳುತ್ತಿದ್ದೆವು. ಇದು ಹತ್ತು ನಿಮಿಷಗಳಲ್ಲಿ ನಮಗೆ ಗುಟ್ಟು ಗೊತ್ತಾಗಿಬಿಡುತ್ತಿದ್ದಿತು. ಅಲ್ಲಿಂದ ಮೇಲೆ ಅಮೃತ ಸರೋವರದಲ್ಲಿ ಜಲಕೇಳಿ; ಅಥವಾ ಒಂದೊಂದು ಸಾರಿ 'ಅಯ್ಯೋ' ಎನ್ನಿಸುವಷ್ಟು ಅಸಂತೋಷ ಇಕ್ಕಳದ ಹಿಡಿತ! ನಾವೇ ಹೇಳಿಕೊಳ್ಳುತ್ತಿದ್ದೆವು, ಅವರೊಂದಿಗೆ ಹೇಳಿಬಿಡುತ್ತಿದ್ದೆವು: "ಬೀದಿಯ ದಾಸಯ್ಯನ ಹರಟೆಗೇಕೆ ಅಷ್ಟೊಂದು ತವಕ, ಸ್ವಾಮಿ ? ತಾವೆಲ್ಲಿ! ಅವನೆಲ್ಲಿ!" ಆದರೆ ಅವರದ್ದು ಮುಟ್ಟಿದರೆ ಮುನಿಯುವ ಮರ್ಜಿ. ಅತಿ ಬೇಗ ಅವರ ಮೃದು ಹೃದಯಕ್ಕೆ ಅಹಿತವಿಡಂಬನ ಚುಚ್ಚಿಕೊಳ್ಳುತ್ತಿತ್ತು, ಅಂಟಿಕೊಳ್ಳುತ್ತಿತ್ತು. ಜೊತೆಗಾರರೊಬ್ಬರು "ನಾವು ಕಾಡುಸಂಪಿಗೆ, ನೀವು ಕಸಿಸಂಪಿಗೆ" ಎಂದದ್ದೂ, ಮತ್ತೊಬ್ಬರು "ಆಕ್ಸ್‌ಫರ್ಡ್ ಪದವಿಯಿಲ್ಲದಿದ್ದರೆ ನಿನ್ನ ಭವಿಷ್ಯ ಮೊಟಕು" ಎಂದದ್ದೂ, ಅವರನ್ನು ಚಿರಕಾಲ ಪೀಡಿಸಿರಬೇಕು. ನುಂಗಿದ ವಿಷಕಣ ಗುಪ್ತವಾಗಿ ಜಠರದಲ್ಲಿ ಉಳಿದುಬಿಟ್ಟಂತೆ; ಎಷ್ಟುಸಲ ಕಾರಿದರೂ ಹೊರಬೀಳದೆ ಅಸ್ವಸ್ಥಮಾಡಿದಂತೆ. "ಶ್ರೀ"ಯವರ ತೀವ್ರ ಪ್ರಾಮಾಣಿಕತನ, ಘನ ಭಾವನೆಗಳಲ್ಲಿ ಅವರಿಗಿದ್ದ ಮಿತಿಯಿಲ್ಲದ ಭಕ್ತಿ, ಅವರ ಪ್ರಕೃತಿಯಲ್ಲಿ ಹುದುಗಿದ್ದ ಛಲಮಿಶ್ರಿತವಾದೊಂದು ಗರ್ವ, ಆ ಉಮ್ಮಳಕ್ಕೆ ಕಾರಣ. ಮತ್ತೊಂದು ಸಂಗತಿಯನ್ನೂ ಮುಚ್ಚಿಡಲೇಕೆ? ಕಾಲಕ್ರಮೇಣ "ಶ್ರೀ"ಯವರು ಔದ್ಯೋಗಿಕ ಭಾಷಣಕಾರರಾದಂತೆ, ಆ ಕಸಬುಗಾರನ ಗುಣಾವಗುಣದಿಂದ ಭೂಷಿತರಾದಂತೆ, ಹಲ ಕೆಲವರಿಗೆ ಭಾಸವಾಗಲು ಷುರುವಾಯ್ತು. ಯಾರು ಕರೆದರೂ, ಎಲ್ಲಿ ಎಂದರೂ, ಎಷ್ಟು ಹೊತ್ತಿನಲ್ಲಾದರೂ, ಮಾತನಾಡಿಬಿಡುವ ವಾಗ್ಚಾಪಲ್ಯ ಬಾಧಿತರೋ ಎಂಬ ಅನುಮಾನ; ಅದು "ಶ್ರೀ"ಯವರ ಉಪನ್ಯಾಸವೋ ಒಬ್ಬ ವಾಚಾಳಿಯ ಒದರಾಟವೋ ಎಂಬ ಶಂಕೆ; ಅವರೀಯುತ್ತಿದ್ದ ರಸದ ಗಂಗೆ, ಔನ್ನತ್ಯದ ಹಿಮಾಚಲ, ಆನಂದದ ಆಕಾಶ, ಎಲ್ಲಿ ಹೋಯ್ತೆಂಬ ಪಶ್ಚಾತ್ತಾಪ. "ಶ್ರೀ"ಯವರ ಒಂದು ಉಪನ್ಯಾಸಕ್ಕಾಗಿಯೋ ಎಂದು ಹುಟ್ಟಿ, ಅದಾದೊನೆಡ

ಅದೃಶ್ಯವಾದ, ಒಂದು "ಷೇಕ್ಸ್‌ಪಿಯರ್ ಸಂಘ"ವನ್ನು ನಾ ಬಲ್ಲೆ, ಏನು ಹೇಳಿದರೂ "ಶ್ರೀ"ಯವರಿಗೂ ಔದ್ಯೋಗಿಕ ಭಾಷಣಕಾರನಿಗೂ ಅಗಾಧ ವ್ಯತ್ಯಾಸ: ಎಷ್ಟು ಸಾಧಾರಣಮಟ್ಟಕ್ಕೆ ಇಳಿದರೂ ಅವರ ನುಡಿಗಟ್ಟಿನಲ್ಲಿ ಜ್ಞಾನ, ಪ್ರತಿಭೆ, ಗಾಢಾನುಭವ ಪ್ರಕಾಶವಾಗಿಯೇ ಆಗುತ್ತಿತ್ತು; ಒಂದು ಅಪೂರ್ವತೆ, ಅನಿರೀಕ್ಷಿತ ಸೊಗಸು, ಬೇರೆಲ್ಲಿಯೂ ಸಿಗದ ವ್ಯಕ್ತಿ ವೈಶಿಷ್ಟ್ಯ ಕೂಡಿಕೊಂಡೇ ಇರುತ್ತಿತ್ತು. ಮೇಕೆದಾಟಿನ ಚಿಕ್ಕ ಕಮರಿಯಲ್ಲಿ ಹರಿಯು ವಾಗಲೂ ಕಾವೇರಿ ಕಾವೇರಿಯೆ ಅಲ್ಲವೆ? ಅದು ಒತ್ತಟ್ಟಿಗಿರಲಿ. ಈಗ ನಾವು ಗಮನಿಸಬೇಕಾದುದು ಈ ತರದ ಸಂತತವಾಗುದ್ಯೋಗದಿಂದ "ಶ್ರೀ" ಯವರ ಮೇಲಾದ ಪರಿಣಾಮ. ತುಂಬ ಗಡಿಬಿಡಿಗೆ ಅವರು ಸಿಕ್ಕಿ, ಇದು ಹೆಚ್ಚು ಅದು ಕಡಮೆ ಇದು ಮುಖ್ಯ ಅದು ಅಮುಖ್ಯವೆಂಬ ಕುಶಲವಿವೇಚನೆ ಅವರಲ್ಲಿ ನಸುಮುಸಕಾಯಿತು. ಅದರಿಂದ ಅವರಿಗೆ ಕೊನೆಯಲ್ಲಿ ಅನಾವಶ್ಯಕ ವಾದ ನಿರಾಶೆ, ಶೋಕ!

ಬರವಣಿಗೆಯಾಗಲೀ ಭಾಷಣವಾಗಲೀ ಒಂದೇ ಬಗೆಯ ಶೈಲಿ "ಶ್ರೀ"ಯವರ ಹೆಗ್ಗುರುತು. ಅವರಿಗೆ ಸಂಪೂರ್ಣವಾಗಿ ವಶವಾಗಿದ್ದುದು ಮಾತುಗಾರಿಕೆಯ ಶೈಲಿ,—ಕೆಲವು ಸಮಯದಲ್ಲಿ ಅದು 'ಮಾತನಾಡುವ' ಶೈಲಿಯೂ ಅಹುದು—ಗಂಭೀರ ಸಾಮಾನ್ಯ, ನಾಗರಿಕ ಅಶಿಕ್ಷಿತ, ನಿಯಮ ನಿರ್ಬಂಧಗಳ ಹತೋಟಿಯನ್ನು ಅತಿಕ್ರಮಿಸಿದ ಸರಾಗ ಸ್ವತಂತ್ರಶೈಲಿ. ಕನ್ನಡದ ಬಳಕೆಯ ಶಬ್ದಗಳು, ಮರ್ಯಾದೆಗಳು, ದೇಸಿಗಳು, ಸರಲತೆ ಸಾಧಾರಣತೆಗಳು ತಾವಾಗಿ ಬಂದು ಸೇರಿ, ಸಾರವತ್ತಾಗಿ, ರಸವತ್ತಾಗಿ, ಹೃದಯಂಗಮವಾಗುತ್ತಿದ್ದುವು.

"ಹಲವು ಸಾಹಿತ್ಯಗಳನ್ನೆಲ್ಲಾ ನೋಡಿ, ಅನುಭವಿಸಿ, ಸಂಸ್ಕಾರವನ್ನು ಪಡೆಯಬೇಕು ಎಂಬುದಕ್ಕಾಗಿ ಹೇಳಿದೆ. ನಮ್ಮದು, ಆದದ್ದರಿಂದ ಹೆಮ್ಮೆ ಯದು ಎಂಬ ದುರಭಿಮಾನವನ್ನು ಬಿಡೋಣ."

"ಸಂಸಾರವನ್ನು ತೊರೆದ ಸನ್ಯಾಸಿಯ ಕಥೆಯಾದರೂ ಸರಿಯೆ, ಒಂದು ರಾತ್ರಿ ಬೆಳದಿಂಗಳಲ್ಲಿ ಅಲೆತ, ಹಿಂದಿನ ದಿನ ನೀರಿನಲ್ಲಿ ಆಟ, ಎಂದರೆ ಎರಡು ಆಶ್ವಾಸ ಮಲಗಿಹೋಯಿತು ಆ ಕಡೆ."

"ಹೊಸದನ್ನು ಕಲಿಯುವುದರಿಂದ ದೇಶವೂ ಮುಳುಗುವುದಿಲ್ಲ. ಭಾಷೆಯೂ ಕೆಡುವುದಿಲ್ಲ, ಸತ್ಸಂಪ್ರದಾಯವೂ ಅಳಿಯುವುದಿಲ್ಲ. ಅದರಲ್ಲಿ

ಜೀವವಿಲ್ಲದ್ದು ಹೋಗಲಿ, ಬಿಡಿ."

ಆದ್ದರಿಂದ ಅವರ ವಾಕ್ಯಗಳಿಗೆ ಕೊಂಡಿಗೆ ಕೊಂಡಿ ಸೇರಿ ಸರಪಣಿ ಯಾಗುವ ಸರಣಿ. ಪ್ರಾರಂಭಕ್ಕೊಂದು ಸುಲಭವಾದ ಅವಕಾಶ ; ಮುಂದು ವರಿಕೆಯ ಪದ್ಧತಿ ತನ್ನದೇ ಆದುದು ; ಮುಕ್ತಾಯದ ವಿಚಾರ ಬೇರೆ.

"ಏಕೆಂದರೆ, ನಮ್ಮ ಕವಿಗಳಲ್ಲಿ ಪ್ರಮುಖರಾದವರು ಎಷ್ಟೇ ಪಾಂಡಿತ್ಯದ ಹುಚ್ಚುಹೊಳೆಯ ಸೆಳೆತಕ್ಕೆ ಸಿಕ್ಕಿದ್ದರೂ, ಎಷ್ಟೇ ಶಾಸ್ತ್ರದ ನಿರರ್ಥಕವಾದ ನಿರ್ಬಂಧಗಳಿಗೆ ಕಟ್ಟುಬಿದ್ದಿದ್ದರೂ, ಎಷ್ಟೇ ಆ ಕಾಲದ ಅಭಿ ರುಚಿಯ ಸಂಕೇತಗಳಿಗೆ ಅಂಧಪರಂಪರೆಯಾಗಿ ಮನ್ನಣೆಯನ್ನು ತೆತ್ತಿದ್ದರೂ, ಎಷ್ಟೇ ತಮ್ಮ ತಮ್ಮ ಮತಸಿದ್ಧಾಂತಗಳನ್ನು ರಾದ್ಧಾಂತಮಾಡಿ, ವಿಸ್ತರಿಸಿ, ಲಂಬಿಸಿ, ಮರಳುಗಾಡಿದಲ್ಲಿ ಬಾಯಾರಿಕೆಯನ್ನಿಂಗಿಸುವ ಹೊಳೆ ಮುಚ್ಚಿ ಹೋಯಿತೆಂಬಂತೆ ತೀರ್ಥಂಕರರ, ಪುರಾತನ ಭಕ್ತರ, ಅವತಾರಪುರುಷರ, ವೀರರ, ನಾಯಕರ, ದಿವ್ಯ ವಿಗ್ರಹಗಳನ್ನು ಸರ್ವಕಾಲದಲ್ಲಿಯೂ ಸರ್ವರೂ ಮೆಚ್ಚುವಂತೆ ಕಡೆದಿರಿಸಲಾರದೆ ಹೋದರೂ, ಈ ಮತಾಭಿಮಾನಿಗಳಲ್ಲಿ, ಈ ಶಾಸ್ತ್ರ ಪಕ್ಷಪಾತಿಗಳಲ್ಲಿ, ಈ ಪಂಡಿತರಲ್ಲಿ, ಹೊಟ್ಟೆಯೊಳಗೆ ಒಬ್ಬ ಹುಟ್ಟು ಕವಿ ಅವಿತುಕೊಂಡಿದ್ದದ್ದರಿಂದ, ಆ ಹುಟ್ಟುಕವಿ ಸರಿಯಾದ, ಸ್ವತಂತ್ರವಾದ, ಸಂಪೂರ್ಣವಾದ, ವಿವಿಧ ಮಹಾನುಭವ ಚೋದಿತವಾದ ಶುದ್ಧ ಕಲಾ ಜ್ಯೋತಿಯ ಬಿಸಿಲಿನಲ್ಲಿ ಹೊಮ್ಮಿ, ಬೆಳದಿಂಗಳಿನಲ್ಲಿ ಹೂವಾಗದಿದ್ದರೂ, ಆ ಒಳಗಿದ್ದ ನಿಸರ್ಗಕವಿಯ ಪ್ರಭಾವದಿಂದ, ಶುಷ್ಕವಾದ ಅರಣ್ಯರೋದನದ ನಡುವೆ, ಸಮಯಬಂದಕೂಡಲೇ, ಒಂದು ಕ್ಷಣದಲ್ಲಿ ಹೃದಯ ಹಿಗ್ಗಿ, ರಸ ಉಕ್ಕಿ, ಮರುಭೂಮಿಯಲ್ಲಿ ತಣ್ಣೆರಳ ಕೊಳ ಊರಿ ಬಂದಂತೆ, ಸುಗ್ಗಿಯ ಹೊಸ ಮಾವಿನ ಚಿಗುರನ್ನು ಸವಿದ ಕೋಗಿಲೆಯ ಕಂಠ ಇಂಪಾದಂತೆ, ಈ ಪಂಜರದ ಹಕ್ಕಿಗಳು, ಈ ಬಲೆಯ ಜಿಂಕೆಗಳು, ನೆಗೆದು, ನುಡಿದು, ಹಾರಿ, ಹಾಡಿ, ಸರಸ್ವತೀ ಪ್ರಸಾದದ ಪೂರ್ಣ ರಮಣೀಯತೆಯನ್ನು ಸಹೃದಯರಿಗೆ ಅನುಭವ ಮಾಡಿಸಿಬಿಟ್ಟಿರುವರು". ಅಬ್ಬಬ್ಬ ಏನು ವಾಕ್ಯ! ಅಲ್ಪವಿರಾಮದ ಹುಲುಸು ಬೆಳೆ! ಆದ್ದರಿಂದ ಅವರ ಭಾಷಣವನ್ನು 'ಬರವಣಿಗೆ'ಯೆಂದು ಲೆಕ್ಕಿಸಿಕೊಂಡು ಓದಿದರೆ ಅದರ ವಯ್ಯಾರಕ್ಕೆ ಅನ್ಯಾಯ ; ಆ ಓದು ವಿಕಾರ ವಾಗಿ ಕೇಳಿಸಿದರೂ ಕೇಳಿಸೀತು. ಅವರೇ ಒಂದೆಡೆ ಹೇಳಿದ್ದಾರೆ: "ಏನೋ ಚಾಪಲ್ಯದಿಂದ ತಪ್ಪುಮಾಡಿದೆ, ಅದನ್ನು ಬರೆದೆ." ಬಿಳಿಕಾಗದದ ಎಲ್ಲೆ

ಕಟ್ಟು, ಲೇಖನಿಯ ಅಂಕೆ, ಬರವಣಿಗೆಯ ಹಿಡಿತ, "ಶ್ರೀ"ಯವರಿಗೆ ಸಾಧಾರಣವಾಗಿ ಹೊಲ್ಲ. ಈ ಮನೋಭಾವ ಅವರ ಭಾಷಣ ಲೇಖನಗಳನ್ನು ಸಡಿಲಗೊಳಿಸುವ ಭಯವಿರಲಿಲ್ಲ; ಏಕೆಂದರೆ ಅವರ ಪದಪ್ರಯೋಗ ಲಯಪೂರ್ಣವಾದದ್ದು. ಅವರು ವಾಕ್ಚತುರರಾಗಿದ್ದುದರಿಂದ, ಅವರ ಒಂದೊಂದು ಭಾಷಣವೂ ಒಂದೊಂದು ಕಾವ್ಯಬಂಧ, ಸಂಗೀತಕೃತಿ, ಕಲಾ ಸೌಧವಾಗಿರುತ್ತಿತ್ತು. ಅವರ ಭಾಷೆಗೆ ಮೆರವಣಿಗೆಯ ಗಜರಾಜ ಜಗ್ಗು ಹಾಕಿ, ಹೀಗೆ ಹಾಗೆ ಒಲೆದು, ಘಂಟೆಯ ಧ್ವನಿಯೊಡನೆ, ಸಾಗುವ ಗತ್ತು, ಗಾಂಭೀರ್ಯ, ರಾಜವೈಖರಿ. "ಶ್ರೀ"ಯವರು ಕುಮಾರವ್ಯಾಸನ ಹಾಗೆ ಪದಗಳೊಡನೆ, ಪದಗುಮ್ಫನಗಳೊಡನೆ, ಚಕ್ಕಂದವಾಡುತ್ತಿದ್ದರು. ಅವರಲ್ಲಿ ಸ್ವಾಭಾವಿಕವಾಗಿ, ಅಪ್ರಯಾಸವಾಗಿ, ಸುಂದರವಾಗಿ, ಫಲಪ್ರದವಾಗಿ, ಪ್ರಾಸ ಬರುತ್ತಿತ್ತು.

"ತೆರೆ ತೆರೆಯಾಗಿ, ನೊರೆ ನೊರೆಯಾಗಿ, ಏಳಿಸಿ, ಕೇಳಿಸಿ, ಹೇಳಿಸಿ, ಮಹಾಭಾರಾವತಾರವಾಯಿತು."

"ಭಾಷೆ ಭಾಷೆಗೆ ಹೊಯ್ಯುತ್ತಲೇ ಇರಬೇಕು. ರೀತಿ ರೀತಿಗೆ ನೆಯ್ಯುತ್ತಲೇ ಇರಬೇಕು."

"ಆ ಹಳೆ ಎಳೆ, ಈ ಒಳ ಎಳೆ".

"ಜನಗಳ ಕಥೆ ಉಪಕಥೆ ದಂತಕಥೆಗಳಲ್ಲಿ ಹಬ್ಬಿದ್ದೇನೋ ಉಬ್ಬಿದ್ದೇನೋ."

"ಆ ನಚ್ಚು, ಆ ಹುಚ್ಚು, ಸಂಪೂರ್ಣವಾಗಿ ಅವರನ್ನು ಬಿಡಲಿಲ್ಲ."

"ಮುನ್ನುಡಿಕಾರನು ಈ ತನ್ನ ಹಿನ್ನುಡಿಯನ್ನು ಬರೆಯುತ್ತಿದ್ದಾನೆ."

ಪ್ರಾಸ ಉಸಿರುಕಟ್ಟಿ ಸಾಯಿಸುವ ಸುಂಟರಗಾಳಿಯಾಗಬಹುದು, ಚೈತನ್ಯ ತುಂಬಿ ಕುಣಿಸುವ ಜೀವದುಸಿರಾಗಬಹುದು. "ಶ್ರೀ"ಯವರದ್ದು ಎರಡನೆಯ ಬಗೆ. ಬಲವಾದ ಪರಿಣಾಮ ಅವರ ಮಾತಿನ ಗುರಿಯಲ್ಲ, ಪರಿಣಾಮದಲ್ಲಿ ಅವರ ಮಾತು ಬಲಿಷ್ಟ. ಭಾವಪ್ರಮುಖವಾದದ್ದು, ಭಾವಾನ್ವಿತವಾದದ್ದು, ಭಾವಪೂರಿತವಾದದ್ದು, ಅವರ ಮಾತುಗಾರಿಕೆ. ಹೆಬ್ಬಯಕೆ, ಸಮೃದ್ಧ ಶ್ರದ್ಧೆ, ಹುಡುಗರ ಸಂಭ್ರಮ, ಗಾಢ ನಂಬಿಕೆ, ಅವರಲ್ಲಿದ್ದಿತಾಗಿ ಹಾಗಾದದ್ದು ಏನು ಅತಿಶಯ?

ಜ್ಞಾನಜೀವಿಯ ಬಾಳಿಕೆಯಲ್ಲಿ ಒಂದು ಅರ್ಥವತ್ತಾದ ಬದಲಾವಣೆ

ಆಗಿಯೇ ಆಗಬೇಕೆಂದು ನಿಸರ್ಗ ನಿಯಮ. ಒಂದು ದೃಷ್ಟಿಯಿಂದ ಅದು ಬೆಳವಣಿಗೆಯ ಸಂಕೇತ, ಅನುಭವವೃದ್ಧಿಯ ಕುರುಹು, ಹೆಚ್ಚಿದ ಪರ್ಯಾಲೋಚನೆಯ ಕನ್ನಡಿ. ಇನ್ನೊಂದು ದೃಷ್ಟಿಯಿಂದ ಅದು ಬಿಸಿ ಆವೇಶ ತಣ್ಣಗಾದಂತೆ, ಕೂಡಿಸಿ ಕಟ್ಟಿದ ನಂಬಿಕೆ ಕೆದರಿ ಚೆಲ್ಲಿದಂತೆ, ಅಂದದ ಕಳೆ ಕುಂದಿದಂತೆ. ಇಂಗ್ಲಿಷಿನ ಸಾಮತಿ ಒರೆಯುತ್ತದೆ : 'ಮನುಷ್ಯನಿಗೆ ಸಂಸಾರದಲ್ಲಿ ಮೊದ ಮೊದಲು ಪದ್ಯ, ಆಮೇಲಾಮೇಲೆ ಗದ್ಯ.' ಈ ವಿಧದ ಮಾನಸಿಕ ಮಾರ್ಪಾಟು ತಪ್ಪಿಸಿಕೊಳ್ಳಲಾಗದ್ದೂ ಅಹುದು, ಅತ್ಯಗತ್ಯವಾದದ್ದೂ ಅಹುದು. ಭಾಷೆಯ ಬಣ್ಣ ಬಣ್ಣ, ಥಟಪಟ, ಅಲಂಕಾರ, ಸುಪ್ರೌಢಿ, ಆಡಂಬರ, ಯುವಕ ಓದುಗನನ್ನು ಹೆಚ್ಚು ಸೆಳೆಯುವುದು ತರ್ಕಸಮ್ಮತ. ಶಬ್ದ, ಭಾವ, ಅರ್ಥಗಳಲ್ಲಿ ಶಬ್ದ, ಭಾವಗಳ ಕಡೆ ಅವನ ಚಿತ್ತ ಬೇಗ, ಆದರದಿಂದ ಚಲಿಸುತ್ತದೆ. ಮಧ್ಯವಯಸ್ಸಿನಲ್ಲಿ ಅರ್ಥದ ಕಡೆ ಹೆಚ್ಚು ಆದರ, ವಾಗಾಟ್ಟಹಾಸ ಭಾವೋದ್ರೇಕದ ಕಡೆ ಹೆಚ್ಚು ಅನಾದರ. "ಶ್ರೀ" ಯವರ ಉದಾಹರಣೆಯಾದರೋ ಈ ವಿಧಿಗೆ ಅಸಾಧಾರಣ ರೀತಿಯಲ್ಲಿ ನಿಷಿದ್ಧ. ಅವರ ೧೯೧೧–೧೨ರ ಶೈಲಿ, ಸುಮಾರು ೧೯೨೮–೩೦ರ ಶೈಲಿ, ಮತ್ತು ೧೯೪೦ರ ಈಚಿನ ಶೈಲಿಯನ್ನು ಪರಸ್ಪರ ಹೋಲಿಸಿದರೆ ಕಣ್ಣಿಗೆ ಕಟ್ಟುತ್ತದೆ ಆ ಕೌತುಕ. ಮೊದಲು ಅವರಲ್ಲಿ ಉತ್ಸಾಹ, ಧೈರ್ಯ, ಕೆಚ್ಚು : ಅವುಗಳ ಹಿಂದೆ ಅವನ್ನು ಹಾಳತದಲ್ಲಿಟ್ಟು ಆಳಬಲ್ಲ ವಿವೇಚನಾ ಶಕ್ತಿ ಮತ್ತು ವ್ಯವಹಾರ ದಕ್ಷತೆ; ಮೇಲಾಗಿ ಪ್ರಪಂಚದ, ಊಹಾ ಪ್ರಪಂಚದ, ವಿಶಾಲ ಅನುಭವಿಯ ಸಂಯಮ ಮನೋಭಾವ : ಇವೆಲ್ಲವೂ ಕಂಡುಬಂದುದರಿಂದ ಅವರ ಭಾಷೆ ಸುಲಭ, ಸರಳ, ಸತ್ವಪೂರ್ಣ, ಗದ್ಯಕ್ಕನುಗ್ಗುಣವಾದದ್ದಾಗಿತ್ತು. ಮಧ್ಯಕಾಲದಲ್ಲಿ ಆವೇಶ, ಪಕ್ವವಾದ ತಿಳಿವು, ಜಾಣ್ಮೆ, ಮಹಾತ್ಮೆಗಳು ಕೂಡಿಕೊಂಡು ಓಜೋಯುಕ್ತವಾದ ಶೈಲಿ ಬಂತು. ಅದು ಮಧ್ಯಕಾಲದ ಅನುರೂಪ ಫಲ. ಕಡೆಯ ಘಟ್ಟದಲ್ಲಾದರೋ ಆವೇಶದ ಅತಿಶಯ, ಭಾವದೌರ್ಬಲ್ಯ, ವಿವೇಚನೆಯ ಇಳಿಮುಖಗಳ ದೆಸೆಯಿಂದ ಶೈಲಿ ಕೇವಲ ಸಡಿಲವಾದ್ದಷ್ಟೇ ಅಲ್ಲದೆ, ನಿಯತ ಬಂಧವಿಲ್ಲದೆ, ತೋರಿದ ದಾರಿಯಲ್ಲಿ ಹೋಗುವ, ಪೂರ್ವಾಪರ ಯೋಚನೆ ತಪ್ಪಿ ಯುಕ್ತ ಬೆಳವಣಿಗೆಯಿಲ್ಲದೆ, ರೀತಿರಹಿತ ರೀತಿಯನ್ನು ಪ್ರಕಟಿಸುವ ಚಲ್ಲಾಪಿಲ್ಲಿಯಾದ ಪದರಾಶಿಯಾಯ್ತು. ವಾಕ್ಯದ ಬದಲು ಒಂದೆರಡು ಶಬ್ದ ; ಹಾಗೆ ಹಾಗೆ

ನಿಂತ ಪದಗುಂಪುಗಳು; ಗೂಢ ಹಾಸ್ಯ: ಅಪ್ರಾಸಂಗಿಕ ಪರಿಹಾಸ; ಯಾವ ಯಾವುದೋ ಪೂರ್ವ ಕಥಾಸೂಚನೆ; ಇದ್ದಕ್ಕಿದ್ದಂತೆ ಉದ್ಗಾರ; ಒದರಾಟ; ಪದರಾಟ:—ಈ ಬಗೆಯ ಮಾತಿನ ಥಾಟಿಯನ್ನು ಏನೆಂದು ನಿರ್ದೇಶಿಸೋಣ? ನನ್ನ ಮಿತ್ರರೊಬ್ಬರು ಅದನ್ನು ಇಂತು ಬಣ್ಣಿಸಿದರು: "ಬಿ.ಎಂ.ಶ್ರೀಯವರ ಬಿಕ್ಕಳಿಕೆ". ಈ ಶೈಥಿಲ್ಯಕ್ಕೆ, ನಿಶ್ಶಕ್ತಿಗೆ, ಅಡ್ಡಾದಿಡ್ಡಿಗೆ ಗಮನಗೇಡಿಕೆಗೆ, ಕಾರಣವಾವುದು? ಮಹಾವ್ಯಕ್ತಿಯ ಪ್ರತಿಯೊಂದು ವಿದ್ಯಮಾನವೂ ಸದೋಷವಾದರೂ ಪರಿಶೀಲನೆಗೆ ಯೋಗ್ಯ ವಸ್ತು; ಅದರಿಂದ ಪ್ರಯೋಜನ ಯಥೇಷ್ಟ. "ಶ್ರೀ"ಯವರು ತಮ್ಮ ಪ್ರಯಾಣದ ಕಡೆಯ ಮಜಲಿನಲ್ಲಿ ಹತಾಶೆ ಸಂಕಟಗಳನ್ನು ಬಾಚಿ ತಬ್ಬಿಕೊಂಡರು. ನೊಂದ ಜೀವಕ್ಕೆ ನೋವಿನಲ್ಲಿ ಕೊನೆ. "ಶ್ರೀ"ಯವರಿಗೆ 'ಟ್ರಾಜೆಡಿ' ಅಥವಾ ರುದ್ರನಾಟಕದಮೇಲೆ ಯಾವಾಗಲೂ ವೀರಾಭಿಮಾನ ಇದ್ದಿತಲ್ಲವೆ? ಅವರ ದರ್ಶನದಲ್ಲಿ, ಮತದಲ್ಲಿ, "ನಮ್ಮ ಸಂಸಾರ ಅನೇಕ ರೀತಿಯಲ್ಲಿ ಟ್ರಾಜೆಡಿ; ನಮ್ಮ ಜನಾಂಗಜೀವನ ಅನೇಕ ರೀತಿಯಲ್ಲಿ ಟ್ರಾಜೆಡಿ."

ಈ ಕೆಲವು ಸೂಕ್ತಿಗಳನ್ನು ಆಯ್ದುಕೊಂಡು, ಅವನ್ನು ಬಿಡದೆ ಪರ್ಯಾಲೋಚಿಸುತ್ತ, ಅವುಗಳ ತಾತ್ಪರ್ಯವನ್ನು ಹಿಡಿದು ಅನುಷ್ಠಾನಕ್ಕೆ ತರುವುದಲ್ಲವೆ, "ಶ್ರೀ"ಯವರಿಗೆ ನಾವು ಈಯಬಹುದಾದ ಕಾಣಿಕೆ?

"ಅಂಧಶ್ರದ್ಧೆಯನ್ನು ಬಿಟ್ಟು ಸತ್ಯವನ್ನು ಹುಡುಕೋಣ....'ಆಚಾರ್ಯ ದೇವೋಭವ,' ಎಂದೇ ನಾವು ಕುಳಿತುಕೊಳ್ಳಬೇಕಾದುದಿಲ್ಲ."

"ನಮ್ಮ ಸಮಾಜದ ದುಷ್ಪರಿಗತಿ 'ಅತಿ ಸರ್ವತ್ರ ವರ್ಜಯೇತ್' ಎಂಬ ನಾಣ್ಣುಡಿಯನ್ನು ಮರೆತು ನಾವೆಲ್ಲರೂ ಅತಿ ಮತೀಯರಾದ್ದರಿಂದ ಎಂದು ಹೇಳಬಹುದಲ್ಲವೇ?"

"ದಯೆ, ಧರ್ಮ, ಸತ್ಯ ಉಂಟು ಎಂದು ನಂಬಿ ನಡೆಯುವವರೂ ಆಸ್ತಿಕರೇ; ನಡೆಯದವರು ನಾಸ್ತಿಕರೇ, ಏನೇ ನಂಬಿದರೂ."

"'ಅಹಿಂಸಾ ಪರಮೋ ಧರ್ಮಃ' ಎಂಬ ಸೂತ್ರದಮೇಲೆ ಕಟ್ಟಿದ ಧರ್ಮಗಳಿಗೆ ಚ್ಯುತಿಯಿಲ್ಲ."

"ಹೊಂದೊಡರೂ ತೊಡರಲ್ಲವೆ?"

"ಜೀವರಸವೂ ಉಂಟು. ಬರಿಯ ಭ್ರಾಂತಿಯ ಕಸವೂ ಉಂಟು. ಹಿತ್ತಾಳೆಯಿಂದ ಚಿನ್ನ ಕೆಟ್ಟೀತು; ಕಸದಿಂದ ರಸ ವಿಷವಾದೀತು."

"ಹೊಸಸಾಹಿತ್ಯದ ಮೂಲಮಂತ್ರ : 'ಉದಾರಚರಿತಾನಾಂತು ವಸುಧೈವ ಕುಟುಂಬಕಂ.' ಮಾನುಷಿಕವಾದದ್ದು ಯಾವುದೂ ನನಗೆ ಹೊರಗಲ್ಲ' ಎಂಬ ಪಾಶ್ಚಾತ್ಯರ ಆರ್ಯೋಕ್ತಿ."

"ಎತ್ತ ಕಡೆಗೂ ಕಣ್ಣುಮುಚ್ಚಬಾರದು, ಎತ್ತ ಕಡೆಗೂ ಹೃದಯದ ಬಾಗಿಲನ್ನು ಕಿರಿಕಿರಿದು ಮಾಡುತ್ತಾ ಮುಚ್ಚಿಬಿಡಬಾರದು."

"ನಮ್ಮ ಮೈಯಲ್ಲಿ ಹುಟ್ಟಿದ ರೋಗ ನಮ್ಮದಾದರೂ ಕಳೆಯತಕ್ಕ ವಿಷ; ಹೊರಗಿನ ಕಾಡಿನಿಂದ ತಂದ ಮೂಲಿಕೆ, ಹೊರಗಿನದಾದರೂ ರಕ್ತಗತವಾಗಬೇಕಾದ ಅಮೃತ."

"ಕೊನೆಗೆ ನಿಲ್ಲುವುದು ಅಭಿಮಾನವಲ್ಲ, ಸತ್ಯ."

"ಕವಿಯಿಲ್ಲದ ನಾಡು ಕುರುಡು ನಾಡು."

"ಜಳ್ಳನ್ನು ತೂರಿ, ಕಾಳನ್ನು ಕಣಜಕ್ಕೆ ತುಂಬಿ."

"ಯಾವುದಕ್ಕೂ ಒಂದು ಹದ್ದು ಇದೆ; ಬೊಜ್ಜು ಬಲವಲ್ಲ."

"ವಿಮರ್ಶಕ ಬುದ್ಧಿಗೆ ಕಡಿವಾಣ ಹಾಕದೆ."

"ರನ್ನನನ್ನೂ ನಿಲ್ಲಿಸಿ ಪ್ರಶ್ನೆಮಾಡಿ, ಪರೀಕ್ಷೆಮಾಡಿ."

ಪ್ರಜಾಪ್ರಭುತ್ವ : "ಅದು ಬರಿಯ ಬಲವಲ್ಲ; ಬರಿಯ ಬಹುಮತವೇ ಅಲ್ಲ; ಹಕ್ಕುಗಳಿಗಿಂತಲೂ ಹೆಚ್ಚಾಗಿ ಜವಾಬ್ದಾರಿಯನ್ನು ಬಯಸುವ ಬಲ್ಲಾಳುಗಳ ಬಾಳಿಕೆಯ ಆಳಿಕೆ."

ಪ್ರಜಾಪ್ರತಿನಿಧಿಗಳಿಗೆ: "ನೀವು ಜನತೆಯ ಕೆನೆ, ಆಡಳಿತದ ಮೊನೆ."

"ಜನವಾಣಿ ಬೇರು, ಕವಿವಾಣಿ ಹೂವು."

"ಆದರೂ ಯಾವ ಗಳಿಗೆಗೆ ಹೇಗೋ ಮಾನವಪ್ರಕೃತಿ."

"ಬೆಲೆ ಜನಸಂಖ್ಯೆಯಮೇಲೆ, ವಿಸ್ತೀರ್ಣದಮೇಲೆ, ನಿಂತಿಲ್ಲ. ಬೆಲೆ ಬೆಲೆಯಮೇಲೆ ನಿಂತಿದೆ."

"ನಮ್ಮ ಮಾತೇನೂ ನೆನ್ನೆ ಮೊನ್ನೆಯ ಕಾಡುಮಾತಲ್ಲ; ನಮ್ಮ ಕಾವ್ಯಮಾಲೆ ಓದುಬರಹ ಬರದ ಒಡ್ಡರು ಹೇಳುವ ಕುರುಕುಪದವೂ ಅಲ್ಲ."

"ಕನ್ನಡದ ಬೇರನ್ನು ಕೊಯ್ದು, ಕನ್ನಡನಾಡನ್ನು ಒಂದುಗೂಡಿಸಬಹುದೆ? ನಾಡಿಗೆ ಆಗ ಕನ್ನಡತನವೆಲ್ಲಿ? ಇಂಗ್ಲಿಷಿನಲ್ಲಿಯೋ ಹಿಂದಿಯಲ್ಲಿಯೋ ಕೆಲಸ ನಡೆಯುವ ಹಾಗಾದರೆ ಬೇರೆ ಒಂದು ಕನ್ನಡ ನಾಡೇಕೆ?"

"ನಮ್ಮ ಅದೃಷ್ಟ ನಮ್ಮ ಕೈಯಲ್ಲೇ ಅಡಗಿದೆ."

"ಕನ್ನಡನಾಡಿಗೆ ಕನ್ನಡವೇ ಗತಿ, ಅನ್ಯಥಾ ಶರಣಂ ನಾಸ್ತಿ. ಸಂಸ್ಕೃತವಲ್ಲ, ಇಂಗ್ಲಿಷಲ್ಲ, ಹಿಂದಿಯಲ್ಲ, **ಕನ್ನಡ**."

"ಕನ್ನಡ, ನಮ್ಮ ಕನ್ನಡ, ನಮ್ಮ ಹಿರಿಯರ ಕನ್ನಡ, ನಮ್ಮ ಮಕ್ಕಳ ಮೊಮ್ಮಕ್ಕಳ ಕನ್ನಡ."

"ಕುಮಾರವ್ಯಾಸನಲ್ಲಿ ಕನ್ನಡ, ತಿಳಿಗನ್ನಡ, ತಿರುಳ್ಗನ್ನಡ, ಗೆದ್ದಿತು. ಇನ್ನು ಅದಕ್ಕೆ ಭಯವಿಲ್ಲ."

"ಕನ್ನಡ ಬಲು ಸರಳವಾದ ಸುಲಭವಾದ ಭಾಷೆ. ಇದರ ಮೇಲೆ ಅನಗತ್ಯವಾದ ಶಾಸ್ತ್ರದ ಭಾರವನ್ನು ಹೊರಿಸಬೇಕಾಗಿಲ್ಲ."

"ಕನ್ನಡದ ಸಾರಮಂತ್ರ : ಹೀರಿ ಹೊಮ್ಮುವುದು ; ಮರಳಿ ಮರಳಿ ಪುನರುಜ್ಜೀವನ."

"ಕನ್ನಡದ ಕೆಲಸ, ನುಡಿಯ ನಾಡ ಕೆಲಸ— ಒಂದು ಗುರು ಪರಂಪರೆ."

ನಾನೇ ಆ ಮಾತನ್ನು ನುಡಿಯುವುದು ನಯಭಂಗವಾದರೂ ನುಡಿದು ಬಿಡುತ್ತೇನೆ ; ನುಡಿಯದಿದ್ದರೆ ನನಗೆ ನೆಮ್ಮದಿ ನಾಶ : ಈ ಇನ್ನೂರರು ವತ್ತುಮೂರು ಪುಟಗಳಲ್ಲಿ ಕನ್ನಡಿಗರಿಗೆ ನಿಶ್ಚಯವಾಗಿ ಒಳ್ಳೆಯ ಗದ್ಯ ಸಾಹಿತ್ಯ ಲಭಿಸಿದೆ. "ಶ್ರೀ"ಯವರ ಭಾಷಣ ಲೇಖನ ಮುನ್ನುಡಿಗಳನ್ನು ಹುಡುಕಿ ಹುಡುಕಿ ಸಂಗ್ರಹಿಸಿ, ಅವನ್ನು ಪರಿಶೀಲಿಸಿ, ಸಂಪಾದಕ ಕೆಲಸ ವನ್ನು ಪ್ರೀತಿ ಶ್ರದ್ಧೆ ಎಚ್ಚರಿಕೆ ದಕ್ಷತೆಗಳಿಂದ ನೆರವೇರಿಸಿ, ಶ್ರೀಮಾನ್ ಕೂಡಲಿ ಚಿದಂಬರಂರವರು ಏಕ ಕಾಲದಲ್ಲಿ ಸಾಧಿಸಿದ್ದಾರೆ, ಶ್ರೀ ಯವರಿಗೆ ಉಚಿತ ಸನ್ಮಾನ, ಅವರ ಶಿಷ್ಯ ಪರಂಪರೆಗೆ ಸಂತೃಪ್ತಿ, ಕನ್ನಡಕ್ಕೆ ಆವಶ್ಯಕವಾದೊಂದು ಉತ್ತೇಜನ, ಕರ್ನಾಟಕಕ್ಕೆ ಮಹದುಪಕಾರ. ಎಲ್ಲರೂ ಈ ಮಾಣಿಕ್ಯ ವಚನಗಳನ್ನು ಓದಿ, ಪುಷ್ಟಿಹೊಂದಿ, ಹುರಿದುಂಬಿ, ಕಾರ್ಯೋನ್ಮುಖರಾಗಿ, ಕೈಲಾದಷ್ಟು ಸೇವೆ ಗೈಯಬೇಕೆಂದು ನನ್ನ ನಮ್ರ ಪ್ರಾರ್ಥನೆ.

ಮೈಸೂರು,
ತಾ॥ ೨೭-೭-೧೯೪೮.

ಎಸ್. ವಿ. ರಂಗಣ್ಣ

# 'ಶ್ರೀ'ಯವರ ಜೀವನದ ಕೆಲವು ಮುಖ್ಯ ಇಸವಿಗಳು

೧೮೮೪ : ತುಮಕೂರು ಡಿ|| ಸಂಪಿಗೆಯಲ್ಲಿ ಜನನ (ಜನವರಿ ೩). ೧೯೦೩ : ಬಿ.ಎ. ೧೯೦೬ : ಬಿ. ಎಲ್. ೧೯೦೭ : ಎಂ.ಎ. ೧೯೦೯ : ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಪ್ರೊಬೇಷನರಿ ಇಂಗ್ಲಿಷ್ ಅಧ್ಯಾಪಕರು (ಜನವರಿ ೧೫.) ೧೯೧೦ : ಇಂಗ್ಲಿಷ್ ಅಧ್ಯಾಪಕರು(ಜನವರಿ ೧೨). ೧೯೧೧ : 'ಕನ್ನಡ ಮಾತು ತಲೆಯೆತ್ತುವ ಬಗೆ'—ಭಾಷಣ ಮತ್ತು ಪ್ರಕಟನೆ (ಡಿಸೆಂಬರ್). ೧೯೧೪ : ಇಂಗ್ಲಿಷ್ ಅಸಿಸ್ಟೆಂಟ್ ಪ್ರೊಫೆಸರ್ (ಜನವರಿ ೧). ೧೯೧೯ : ಟೆಂಪೊರರಿ ಜೂನಿಯರ್ ಪ್ರೊಫೆಸರ್ (ಫೆಬ್ರುವರಿ ೧೯). ೧೯೨೩ : ಎರಡನೆಯ ಗ್ರೇಡ್ ಇಂಗ್ಲಿಷ್ ಪ್ರೊಫೆಸರ್ (ಜುಲೈ ೧). ೧೯೨೪ : ಮೈಸೂರು ವಿಶ್ವವಿದ್ಯಾನಿಲಯ ಸಂಘದ ಅಧ್ಯಕ್ಷರು : ಸ್ಟಡಿ ಸರ್ಕಲ್‌ನ ಸ್ಥಾಪನೆ. ೧೯೨೫ : 'ಗದಾಯುದ್ಧ ನಾಟಕಂ'—ಪ್ರದರ್ಶನ (ಡಿಸೆಂಬರ್ ೨೩). ೧೯೨೬ : 'ಗದಾಯುದ್ಧ ನಾಟಕಂ' ಗ್ರಂಥಪ್ರಕಟನೆ ; 'ಇಂಗ್ಲಿಷ್ ಗೀತಗಳು'—ಗ್ರಂಥಪ್ರಕಟನೆ. ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್ ( ತಾ|| ೧–೧೧–೧೯೨೬ ರಿಂದ ತಾ|| ೧–೭–೧೯೩೦). ೧೯೨೭ : ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಎಂ.ಎ., ತರಗತಿಯನ್ನು ತೆರೆದದ್ದು (ಜುಲೈ); ಆನರೆರಿ ಕನ್ನಡ ಪ್ರೊಫೆಸರ್ (ನವೆಂಬರ್ ೭). ಶ್ರೀ 'ಶ್ರೀ ಕೃಷ್ಣರಾಜ ರಜತಮಹೋತ್ಸವ ಪ್ರಗಾಥ' ರಚನೆ. 'ರಜತಮಹೋತ್ಸವ ಸ್ವರ್ಣಪವಕ ಕವಿತಾಸ್ಪರ್ಧೆ' ಗಾಗಿ ದತ್ತಿ. ೧೯೨೮: 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ'—ಕಲ್ಬುರ್ಗಿಯಲ್ಲಿ ನಡೆದ ಕರ್ಣಾಟಕ ಸಾಹಿತ್ಯ ಪರಿಷತ್ತಿನ ೧೪ ನೆಯ ಸಮ್ಮೇಳನದ ಅಧ್ಯಕ್ಷ ಭಾಷಣ (ಜೂನ್ ೧). ೧೯೨೯ : 'ಅಶ್ವತ್ಥಾಮನ್' ನಾಟಕ—ಪ್ರದರ್ಶನ (ಫೆಬ್ರುವರಿ ೧೦). 'ಅಶ್ವತ್ಥಾಮನ್' ಗ್ರಂಥ ಪ್ರಕಟನೆ. ೧೯೩೦: ೧ ನೆಯ ಗ್ರೇಡ್ ಪ್ರೊಫೆಸರ್ (ಜುಲೈ ೧). ಇಂಗ್ಲಿಷ್ ಪ್ರೊಫೆಸರು, ಬೆಂಗಳೂರು ಸೆಂಟ್ರಲ್ ಕಾಲೇಜು (ಆಗಸ್ಟ್ ೧೫). ಮೈಸೂರಿನಲ್ಲಿ ಸೇರಿದ ಕರ್ಣಾಟಕ ಸಾಹಿತ್ಯ ಪರಿಷತ್ತಿನ ೧೬ ನೆಯ ಸಮ್ಮೇಳನದ ಸ್ವಾಗತಾಧ್ಯಕ್ಷರು: ಭಾಷಣ (ಅಕ್ಟೋಬರ್ ೫). ೧೯೩೧ : 'ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ'—"ಶ್ರೀ" ಯವರ ಪ್ರಧಾನ ಸಂಪಾದಕತ್ವದಲ್ಲಿ ಆರಂಭ. ೧೯೩೫:

“ ಪಾರಸಿಕರು ” ನಾಟಕ : “ ಪ್ರಬುದ್ಧ ಕರ್ಣಾಟಕ ” ದಲ್ಲಿ ಪ್ರಕಟನೆ. ಕರ್ಣಾಟಕ ಸಾಹಿತ್ಯ ಪರಿಷತ್ತಿನ ಶಾಶ್ವತ ನಿಧಿಗೆ ರೂ. ೧,೦೦೦ ಗಳ ಸಹಾಯ. ೧೯೩೮ : ಕರ್ಣಾಟಕ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರು. ಅಕ್ಷರ ಸಂಸ್ಕರಣ ಯೋಜನೆ. “ಕನ್ನಡದ ಬಾವುಟ ”—ಗ್ರಂಥಪ್ರಕಟನೆ. “ ನ–ಣ ” ಚರ್ಚೆ. “ ಕನ್ನಡ ನುಡಿ”ಯ ಪ್ರಕಟನೆ. “ಕನ್ನಡ ಸಾಹಿತ್ಯ ಪರೀಕ್ಷೆಗಳ” ಏರ್ಪಾಡು. “ ಕನ್ನಡನಾಡಿನ ಚರಿತ್ರೆ ” ಯನ್ನು ಬರೆಸುವ ಏರ್ಪಾಡು. “ಕನ್ನಡ ನುಡಿ ” ಗೆ ಅಚ್ಚುಕೂಟವನ್ನೇರ್ಪಡಿಸಲು ರೂ.೧,೦೦೦ ಗಳ ಸಹಾಯ. ಸಾಹಿತ್ಯ ಪರಿಷತ್ತಿನ ಹೆಸರಿನ ವಿದ್ಯುದ್ದೀಪಾಲಂಕಾರಕ್ಕೆ ರೂ. ೨೦೦ ಗಳ ಸಹಾಯ. “ ರಾಜಸೇವಾಸಕ್ತ” ಬಿರುದಾಂಕಿತರು. ೧೯೩೯ : ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟದ ಸ್ಥಾಪನೆಗಾಗಿ ರೂ. ೫,೦೦೦ ಗಳ ಸಹಾಯ. ಜೈನ ಮಹಾ ಸಮ್ಮೇಳನದವರು ಅಭಿನಂದನ ಪತ್ರಿಕೆ ಅರ್ಪಿಸಿದ್ದು. ೧೯೪೦ : ತಿರುಪತಿಯಲ್ಲಿ ಸೇರಿದ ಪ್ರಾಚ್ಯ ವಿದ್ಯಾಸಮ್ಮೇಳನದ ಕನ್ನಡ ಶಾಖೆಯ ಅಧ್ಯಕ್ಷರು. ೧೯೪೧ : ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ “ ಶ್ರೀ ” ಯವರ ೫೭ ನೆಯ ಹುಟ್ಟಿದ ಹಬ್ಬದ ದಿನಾಚರಣೆ ಮತ್ತು “ ಸಂಭಾವನೆ ”ಗ್ರಂಥದ ಅರ್ಪಣೆ. ೧೯೪೨ : ಸರಕಾರದ ಕೆಲಸದಿಂದ ನಿವೃತ್ತಿ. ಪರಿಷತ್ತಿನ ಉಪಾಧ್ಯಕ್ಷ ಸ್ಥಾನದಿಂದ ಬಿಡುಗಡೆ (ಡಿಸೆಂಬರ್ ೨೧). ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರು. ೧೯೪೩ : “ ಹೊಂಗನಸುಗಳು ” : ಷಷ್ಟ್ಯಬ್ದಪೂರ್ತಿಯ ಸಮಯದಲ್ಲಿ ಗ್ರಂಥ ಪ್ರಕಟನೆ. ೧೯೪೪ : ಧಾರವಾಡದ ಆರ್ಟ್ಸ್ ಕಾಲೇಜಿನ ಪ್ರಿನ್ಸಿಪಾಲರಾಗಿ ಧಾರವಾಡಕ್ಕೆ ಪ್ರಯಾಣ. ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷ ಸ್ಥಾನದಿಂದ ಬಿಡುಗಡೆ. ೧೯೪೬ : ಜನವರಿ ೫ ರಲ್ಲಿ, ೬೩ ನೆಯ ವಯಸ್ಸಿನಲ್ಲಿ, ಧಾರವಾಡದಲ್ಲಿ ಹೃದಯಸ್ತಂಭನದಿಂದ ಲೋಕಯಾತ್ರೆಯ ಸಮಾಪ್ತಿ.

---

## ‘ ಶ್ರೀ ’ ಅವರ ಕೃತಿಗಳು

Rhetoric Notes. ಇಂಗ್ಲಿಷ್ ಗೀತಗಳು, (೧೯೧೯). ಗದಾಯುದ್ಧ ನಾಟಕಂ (೧೯೨೬). ಅಶ್ವತ್ಥಾಮನ್ (೧೯೨೯). ಪಾರಸಿಕರು (೧೯೩೫). ಕನ್ನಡ ಛಂದಸ್ಸಿನ ಚರಿತ್ರೆ (೧೯೩೬). ಕನ್ನಡದ ಬಾವುಟ (ಸಂಪಾದಿತ) (೧೯೩೮). ಹೊಂಗನಸುಗಳು (೧೯೪೩). ಕನ್ನಡದ ಕೈಪಿಡಿ—ಭಾಗ ೨(೧೯೪೭). ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ—ಭಾಗಗಳು ೧–೨ (೧೯೪೮).

# ಒಳಸಿಡಿ—೧

## ಒಳಸಿಡಿ—೨

## ಒಳಸಿಡಿ—೩



ಮುಖಚಿತ್ರ :

ಶಿವಮೊಗ್ಗ ಜಿಲ್ಲೆಯ ಕರ್ಣಾಟಕ ಸಂಘಗಳಲ್ಲಿ " ಶ್ರೀ " ಯವರು—

ಹೈದರಾಬಾದು ಸಂಸ್ಥಾನದಲ್ಲಿ ‘ ಶ್ರೀ ’ ಯವರು–ಮೇ, ೧೯೩೭ ೨೦೯ನೆಯ ಪುಟದೆದುರು

# ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ

## ಕನ್ನಡನಾಡು ತಲೆಯೆತ್ತುವ ಬಗೆ *

ಅಧ್ಯಕ್ಷರೆ, ಆರ್ಯರೆ.

ಕನ್ನಡ ವಿದ್ಯೆಯನ್ನು ವೃದ್ಧಿಮಾಡುವುದಕ್ಕೆ ಏರ್ಪಟ್ಟಿರುವ ಈ ಸಂಘದಲ್ಲಿ ಆ ಭಾಷೆಯ ಮುಂದಿನ ಏಳಿಗೆಯನ್ನು ಕುರಿತು ಪ್ರಸ್ತಾಪಿಸುವುದು ಹಿತವಾಗಿಯೇ ಇರುತ್ತದೆ. ಆದರೆ ಈ ವಿಷಯದಲ್ಲಿ ಉತ್ಸಾಹ ಎಲ್ಲರಿಗೂ ಒಂದೇ ಸಮನಾಗಿರುವುದಿಲ್ಲ; ಕೆಲವರು ಇದಕ್ಕೆ ವಿರೋಧಿಗಳೇ ಇರಬಹುದು; ಇದಲ್ಲದೆ ನಮ್ಮಲ್ಲಿಯೂ ಕೆಲವರಿಗೆ ಸಭೆಕೂಡಿದಾಗ ಉತ್ಸಾಹಕಳೆ ತುಂಬಿದ್ದು, ಮನೆಗೆ ತಿರುಗಿದಾಗ ಮಾಯವಾಗುವುದೂ ಉಂಟು. ಈ ಕಾರಣಗಳಿಂದ ಭಾಷೆಯ ಪ್ರಕೃತಸ್ಥಿತಿಯನ್ನೂ ವೃದ್ಧಿಮಾರ್ಗವನ್ನೂ ತಿಳಿಸುವುದಕ್ಕೆ ಮುಂಚೆ, ಸಂಘದ ಕಾರ್ಯದಲ್ಲಿ ಅಸಮಾಧಾನಪಡತಕ್ಕವರ ಕಾರಣಗಳೇನು, ಅಸಡ್ಡೆ ಮಾಡತಕ್ಕವರ ಕಾರಣಗಳೇನು, ಇವರಿಬ್ಬರಿಗೂ ಹೇಳಬಹುದಾದ ಸಮಾಧಾನಗಳೇನು, ಈ ಅಂಶಗಳನ್ನು ವಿಚಾರಮಾಡುವುದು ಅವಶ್ಯಕವಾಗಿದೆ.

೨. ದೇಶಭಾಷೆಗಳು ಪ್ರಬಲವಾಗುವುದಕ್ಕೆ ಇಷ್ಟವಿಲ್ಲದವರ ಅಭಿಪ್ರಾಯಗಳನ್ನು ಹೀಗೆ ಸೂಚಿಸಬಹುದು—"ಇಂಗ್ಲಿಷ್ ಚಕ್ರಾಧಿಪತ್ಯ ನೆಲೆಯಾಗುವುದಕ್ಕೆ ಮುಂಚೆ ಇದ್ದ ಸ್ಥಿತಿ ಈಗ ಇಂಡಿಯಾದಲ್ಲಿ ಇಲ್ಲ. ಆಗ ಹೊರಗಿನ ಪ್ರಪಂಚದ ಸೆಲೆಯೇ ಇರಲಿಲ್ಲ. ರಾಜ್ಯವೂ ಎಂಟು ಹತ್ತು ಪ್ರಾಂತ್ಯಗಳಾಗಿ ಒಂದಕ್ಕೊಂದು ಸಂಪರ್ಕವೇ ಇಲ್ಲದೇ ಇತ್ತು. ಜೀವನ ಸುಲಭವಾಗಿ ಜರುಗುತ್ತಿತ್ತು. ಅದೆಲ್ಲಕ್ಕೂ ತಕ್ಕಹಾಗೆ ಪ್ರಪಂಚವನ್ನು ಮಾಯವೆಂದು ಎಣಿಸಿ, ಸಂಸಾರವನ್ನು ಪಾಶವೆಂದು ಹೇಳಿ ಬೇಸರಪಟ್ಟು, ಈ ಲೋಕಯಾತ್ರೆ ಎಷ್ಟು ಬೇಗ ಮುಗಿದೀತೋ ಎಂದು ಯಾವಾಗಲೂ ಕಾಡಿನ ಮೇಲೇ ದೃಷ್ಟಿಯಿಟ್ಟುಕೊಂಡು ಇರುತ್ತಿದ್ದರು. ಈಗ

---

* ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ವಾರ್ಷಿಕ ಸಭೆಯಲ್ಲಿ ಮಾಡಿದ ಉಪನ್ಯಾಸ (ಡಿಸೆಂಬರ್, ೧೯೧೧).

ಇದೊಂದೂ ನಡೆಯುವುದಿಲ್ಲ. ದೇಶಕ್ಕೆಲ್ಲಾ ಚಕ್ರವರ್ತಿ ಒಬ್ಬನಾದನು; ದೇಶವೆಲ್ಲಾ ಕಬ್ಬಿಣದಿಂದ ಕಟ್ಟಿ ಬಿಗಿದಂತೆ ಏಕವಾಯಿತು; ಕೆಂಪುಜನರ ವಿದ್ಯೆ, ವ್ಯಾಪಾರ, ಕೈಗಾರಿಕೆ, ಇವುಗಳ ಉರುಬಿನಲ್ಲಿ ನಾವು ಮೂಲೆಗೆ ಬೀಳುತ್ತಿದೇವೆ. ಅವರ ಆಳಿಕೆಯಿಂದ ಶಾಂತಿಯೇನೋ ದೊರಕಿತು. ಆದರೆ ಮಿಕ್ಕ ಪುರುಷಾರ್ಥಗಳೆಲ್ಲಾ ನಾವೇ ಶ್ರಮಪಟ್ಟು ಸಂಪಾದಿಸಿದಲ್ಲದೆ ಬರುವುವಲ್ಲ. ಹಿಂದಿನಂತೆ ಒಡೆದುಕೊಂಡೇ ಇದ್ದೆವೇ, ಬಿದ್ದೇಹೋಗುವೆವು; ಒಗ್ಗಟ್ಟಾದೆವೇ, ಇನ್ನೂ ನಿಲ್ಲುವ ಆಸೆಯುಂಟು. ಒಗ್ಗಟ್ಟು ಬಾಯಿಮಾತಿಗೆ ಬರತಕ್ಕದ್ದಲ್ಲ. ಯಾವ ಯಾವ ಭೇದಗಳಿಂದ ಆರ್ಯಭೂಮಿಯಲ್ಲಿ ಒಗ್ಗಟ್ಟು ಹುಟ್ಟಲಿಲ್ಲವೋ, ಆಯಾ ಭೇದಗಳನ್ನೆಲ್ಲಾ ಸುಟ್ಟು ಬೂದಿಮಾಡಿ ನೀರಿನಲ್ಲಿ ಕಲಸಿಬಿಡಬೇಕು. ಆಚಾರ, ಜಾತಿ, ಮತ, ಎಲ್ಲಾ ಒಂದೇ ಆಗುವಂತೆ ಪ್ರಯತ್ನ ಮಾಡುತ್ತ ಹೋಗಬೇಕು. ಇವೆಲ್ಲಕ್ಕೂ ಮೊದಲು ಭಾಷೆ ಒಂದಾಗಬೇಕು; ಇಂಗ್ಲಿಷ್, ಇಲ್ಲವೆ ಹಿಂದಿ, ಯಾವುದೋ ಒಂದು ಸಾಧ್ಯವಾದದ್ದು. ಮಿಕ್ಕ ಭಾಷೆಗಳು ಸತ್ತುಹೋಗಲಿ; ಈಗ ತಾವಾಗಿಯೇ ಸಾಯುತ್ತಾ ಬಿದ್ದಿರುವುವು; ಎರಡು ದಿನ ನಾವು ತಟಸ್ಥರಾಗಿದ್ದರೆ ಹೋಗಿ ಹಳ್ಳಿಗಳಲ್ಲಿ ಅಡಗಿಕೊಳ್ಳುವುವು; ಆಗ ರಾಜಭಾಷೆಯೊಂದು ಹಿಮಾಲಯದಿಂದ ರಾಮೇಶ್ವರದವರೆಗೂ ಸ್ವೇಚ್ಛೆಯಾಗಿ ಓಡಾಡುವುದು. ಇದು ಬಿಟ್ಟು, ನರಳುತ್ತಿರುವ ದೇಶ ಭಾಷೆಗಳನ್ನು ಗುಣಮಾಡಿ ತಲೆಯೆತ್ತಿಸ ಬೇಕು ಎನ್ನುವರು ಇಂಡಿಯದ ಒಗ್ಗಟ್ಟಿಗೆ ಅಡ್ಡಬಂದು ನಿಲ್ಲುವರು; ಅವರು ರಾಜ್ಯದ ಹಿತಚಿಂತನೆಗೆ ಮೃತ್ಯುಗಳು."

೩. ಹೀಗೆ ಯೋಚಿಸತಕ್ಕವರು ತಿಳಿಯದವರು, ಕೆಡುಕಿಗಳು, ಅಭಿಮಾನವಿಲ್ಲದವರು ಎಂದು ಹೇಳುವುದಕ್ಕಾಗುವುದಿಲ್ಲ. ಇವರು ಬಹುದೂರ ಯೋಚನೆಮಾಡಿ, ಒಗ್ಗಿ ಬಂದ ಪಕ್ಷಪಾತವನ್ನು ತೊರೆದು, ಅಲ್ಪ ಲಾಭಕ್ಕೇ ದಣಿದು ಹೋಗದೆ, ರಾಜ್ಯಕ್ಕೆಲ್ಲಾ ಉತ್ತಮವಾಗಿಯೂ ಶ್ರೇಯಸ್ಕರವಾಗಿಯೂ ಇರುವ ಮಾರ್ಗವನ್ನು ಉಪದೇಶಮಾಡುತ್ತಿರುವರು. ದೇಶಭಾಷೆಗಳಲ್ಲಿ ವಿಶ್ವಾಸವುಳ್ಳವರು ಇವರಿಗೆ ಏನುತಾನೇ ಹೇಳಲಾದೀತು? ನಮಗೆ ಒಗ್ಗಟ್ಟು ಬೇಡ ಎನ್ನ ಬಹುದೆ? ಒಂದು ಭಾಷೆ ಇಲ್ಲದೆ ಒಗ್ಗಟ್ಟೂ ಇಲ್ಲವಾದರೆ, ದೇಶಭಾಷೆಗಳನ್ನು ನಾವು ಕೈಬಿಟ್ಟೇ ತೀರಬೇಕು. ನಮ್ಮ ಪುಣ್ಯಕ್ಕೆ ಆ ನಿರ್ಬಂಧವೇನೂ ಇಲ್ಲ; ಏಕೆಂದರೆ ನಾವು ಈ ಸಿದ್ಧಾಂತವನ್ನು ಸಂಪೂರ್ಣ

ವಾಗಿ ಒಪ್ಪಬೇಕಾದದ್ದಿಲ್ಲ. ಒಂದೇ ಭಾಷೆ ಇರುವುದು ಉತ್ತಮಪಕ್ಷವೇ ಸರಿ; ಆ ರೀತಿ ಇರತಕ್ಕ ಜನರು ಪುಣ್ಯವಂತರು. ಆದರೆ ಇದಕ್ಕೆ ಆಯಾ ಜನರ ಚರಿತ್ರೆ ಮೂಲ ಕಾರಣವಾಗಿದೆ. ಯಾವ ದೇಶದಲ್ಲಿ ಒಂದೇ ಜಾತಿಯ ಜನರು ಹೆಚ್ಚುತ ಹೋದರೋ, ಇಲ್ಲವೆ ಕೆಲವರಾದ ಪೂರ್ವನಿವಾಸಿಗಳಿಗೂ ತಮ್ಮ ಭಾಷೆಯನ್ನೇ ಹಿಂದೆಯೇ ಕಲಿಸಿಬಿಟ್ಟರೋ, ಅಲ್ಲಿ ಈಗ ಒಂದೇ ಭಾಷೆ ನಿಂತಿದೆ. ಇಂಡಿಯದಲ್ಲಿ ಹಾಗಾಗಲಿಲ್ಲ. ಇಲ್ಲಿ ಮುಖ್ಯವಾಗಿ ಎರಡು ಬುಡ ಕಟ್ಟಿಗೆ ಸೇರಿದ ಆರ್ಯಶೂದ್ರರೇ ಇದ್ದರೂ, ಅವರ ಎರಡು ಭಾಷೆಗಳೂ ಒಡೆದು ಈಗ ಮೇಲಾಗಿರತಕ್ಕುವು ಹತ್ತು ಹದಿನೈದಿರುತ್ತವೆ. ಇವುಗಳಲ್ಲಿ ದೇಶಕ್ಕೆಲ್ಲಾ ಯಾವುದಾದರೂ ಒಂದನ್ನು ಹರಡಬೇಕಾದರೆ ಮಿಕ್ಕಮಾತಿ ನವರು ಒಪ್ಪುವರೋ? ಅವರ ಅಭಿಮಾನವೇನಾಗಬೇಕು? ಇದಲ್ಲದೆ ಶ್ರಮವೆಷ್ಟು? ಯಾವ ಕಾಲಕ್ಕೆ ಕೊನೆ ಮುಟ್ಟಬೇಕು? ಹಾಗೆ ಮಾಡಿದರೂ ಪ್ರಜೆಗೆಲ್ಲಾ ಒಂದು ಭಾಷೆಯಾಯಿತೇ ಹೊರತು, ಎಂದಿನಂತೆ ರಾಜರ ಸಂಗಡ ಕೆಲಸ ನಡೆಯುವುದಕ್ಕೆ ಇಂಗ್ಲಿಷ್ ಕಲಿತೇ ತೀರಬೇಕು. ಒಳ್ಳೆಯದು, ಇಂಗ್ಲಿಷನ್ನೇ ಏಕೆ ದೇಶಕ್ಕೆಲ್ಲಾ ಹರಡಬಾರದು? ಆಗಬಹುದು; ಆದರೆ ಮೂವತ್ತು ಕೋಟಿ ಜನರಲ್ಲಿ ಒಂದು ಪಿಳ್ಳೆಯೂ ಬಿಡದಹಾಗೆ ಇಂಗ್ಲಿಷ್ ಮಾತನ್ನು ಆಡುವುದು ಸುಲಭಸಾಧ್ಯವೇ ಯೋಚಿಸಿ; ಆ ಯುಗ ಬರುವ ತನಕ ನಾವೇನು ಮಾಡಬೇಕು? ಕನ್ನಡಿಯಲ್ಲಿರುವ ಗಂಟಿಗಾಗಿ ಕೈಯಲ್ಲಿರು ವುದನ್ನು ಬಿಟ್ಟು ಕುಳಿತುಕೊಳ್ಳುವುದಷ್ಟೆ!

೪. ಇದನ್ನು ಬಿಟ್ಟು ಬೇರೆ ಮಾರ್ಗವನ್ನು ಹುಡುಕಿದರೆ ಅಭಿ ಮಾನವೂ ಉಳಿಯುತ್ತದೆ, ಅನುಕೂಲವೂ ಆಗುತ್ತದೆ. ಅದೇನೆಂದರೆ, ಸಾಮಾನ್ಯವಾದ ರಾಜಕಾರ್ಯಕ್ಕೂ, ಇಂಡಿಯರಾಜ್ಯಕ್ಕೆಲ್ಲಾ ಸಂಬಂಧಪಟ್ಟ ವಿಷಯುಗಳಿಗೂ, ಬೇರೆ ಬೇರೆ ಪ್ರಾಂತ್ಯಗಳಿಂದ ಜನ ಕಲೆಯತಕ್ಕ ಸಭೆಗಳಿಗೂ, ಬಳಸುವುದಕ್ಕೆ ಇಂಗ್ಲಿಷ್ ಭಾಷೆಯನ್ನು ಇಟ್ಟುಕೊಳ್ಳುವುದು; ಪ್ರಾಂತ್ಯ ಗಳಲ್ಲಿ ಹುಡುಗರು, ಹೆಂಗಸರು, ಒಕ್ಕಲಿಗರು ಎಲ್ಲರ ವಿದ್ಯಾಭಿವೃದ್ಧಿಗಾಗಿ ಆಯಾ ಜನರ ದೇಶಭಾಷೆಯನ್ನು ಇಟ್ಟುಕೊಳ್ಳುವುದು. ಎರಡಲ್ಲ, ಇಪ್ಪತ್ತು ದೇಶಭಾಷೆಗಳಿದ್ದರೂ ಒಗ್ಗಟ್ಟಿಗೆ ಕುಂದುಕವಿಲ್ಲ; ಎಲ್ಲಾ ಕಡೆಯಲ್ಲಿಯೂ ಆಡ ಬಹುದಾದ ಒಂದು ರಾಜಭಾಷೆಯ ಜೊತೆಗೆ ಎಷ್ಟುಬೇಕಾದರೂ ಇವು ಇರ ಬಹುದು. ಒಂದೇ ಏಕಭಾಷೆಯಿಲ್ಲದೆ ಏಕರಾಜ್ಯವಿಲ್ಲ ಎನ್ನುವ ಮಾತು

ಸುಳ್ಳು. ಹಿಂದೆ ಸಣ್ಣ ರಾಜ್ಯಗಳಲ್ಲಿ ಹೀಗಿತ್ತು; ಈಗಲೂ ಕೆಲವು ಕಡೆ ಹೀಗಿದೆ. ಆದರೆ ಇಪ್ಪತ್ತನೆಯ ಶತಮಾನದ ವಿಸ್ತಾರವಾದ ಚಕ್ರಾಧಿಪತ್ಯಗಳಲ್ಲಿ, ಸಮವಾದ ನಾಗರಿಕತೆಯೂ, ರಾಜಿಕ ವಿಷಯಗಳಲ್ಲಿ ಬಹುಕಾಲದಿಂದ ಕಷ್ಟ ಸುಖಕ್ಕೂ ಜಯಾಪಜಯಕ್ಕೂ ಸಮಭಾಗಿಗಳಾಗಿ ಮುಂದೆಯೂ ಏಕಗೃಹ ಕೃತ್ಯದಿಂದ ಪರಸ್ಪರ ಲಾಭವುಂಟೆಂಬ ತಿಳಿವಳಿಕೆಯೂ, ಮತ, ಜಾತಿ, ಆಚಾರ, ಭಾಷೆಗಳ ಎಲ್ಲೆಕಟ್ಟುಗಳನ್ನು ಮೀರಿ ಜನಾಂಗಗಳನ್ನು ಒಟ್ಟಿಗೆ ಬೆಸೆಯುತ್ತಿವೆ. ಈ ನಾಗರಿಕತೆ ಇಂಡಿಯದಲ್ಲಿ ಮೊದಲಿಂದ ಉಂಟು; ಈ ತಿಳಿವಳಿಕೆ ಈಗೀಗ ಹುಟ್ಟುತ್ತಿದೆ. ಐಕಮತ್ಯವೆಂದರೆ ಎಲ್ಲರೂ ಒಂದೇ ಪಡಿಯಚ್ಚಾಗಿ ಸ್ವತಂತ್ರವನ್ನು ನೀಗಿಕೊಳ್ಳಬೇಕೆಂದಲ್ಲ; ಭೇದವಿರಬೇಕಾದ ಕಡೆ ಭೇದವೂ, ಸಾಮ್ಯವಿರಬೇಕಾದ ಕಡೆ ಸಾಮ್ಯವೂ, ಮುಖ್ಯ ಪರಸ್ಪರ ವಿಶ್ವಾಸವಿದ್ದಲ್ಲಿ ಎರಡೂ ಐಕಮತ್ಯದಲ್ಲಿ ಸೇರಬಹುದು. ಆದಕಾರಣ, ಅಭಿಮಾನದಿಂದ ದೇಶಭಾಷೆಗಳನ್ನು ಉದ್ಧಾರಮಾಡಿ ಆಯಾ ಪ್ರಾಂತ್ಯಗಳ ಜನಸಾಮಾನ್ಯಕ್ಕೂ, ಅನುಕೂಲಕ್ಕೆ ಇಂಗ್ಲಿಷ್ ಭಾಷೆಯನ್ನು ಸ್ವೀಕರಿಸಿ ಒಗ್ಗಟ್ಟಿಗಾಗಿ ಒದ್ದಾಡುವ ಇಂಡಿಯದ ವಿದ್ಯಾವಂತರಿಗೂ, ಇಬ್ಬರಿಗೂ ಲಾಭ ವಾಗುವಂತೆ ನಡೆಯತಕ್ಕದ್ದೇ ಮೇಲು. ಈ ರೀತಿ ಈಗ ನಡೆಯುತ್ತಲೇ ಇದೆ, ಮುಂದೆಯೂ ಅದನ್ನೇ ಬಲಪಡಿಸಿಕೊಂಡು ಹೋಗುವುದು ಮೇಲೆಂದು ಕಾಣುತ್ತದೆ.

೫. ನಾವು ಸ್ವೀಕರಿಸತಕ್ಕ ಭಾಷೆಗಳನ್ನು ಹೇಳುತ್ತಿರುವಾಗ ಸಂಸ್ಕೃತ ವನ್ನು ಬಿಡುವುದಕ್ಕಿಲ್ಲ. ಇದು ನಮ್ಮ ಪೂರ್ವಿಕರಾದ ಆರ್ಯರ ಭಾಷೆ ; ಇದರಲ್ಲೇ ನಮ್ಮ ಪುಸ್ತಕ ಭಂಡಾರವೆಲ್ಲಾ ಅಡಗಿದೆ. ಇದನ್ನು ತಿಳಿದ ಹೊರತು ಹಿಂದಿದ್ದ ಸ್ಥಿತಿಯಾಗಲಿ, ಈಗಿನ ಸ್ಥಿತಿಗೆ ಕಾರಣ ವಾಗಲಿ, ಮುಂದೆ ತಿದ್ದಬೇಕಾದ ರೀತಿಯಾಗಲಿ ತಿಳಿಯುವದಿಲ್ಲ. ಆದದ್ದರಿಂದ ಇಂಡಿಯದಲ್ಲಿ ವಿದ್ಯಾವಂತನೆನ್ನುವ ಪ್ರತಿಯೊಬ್ಬನೂ ಇಂಗ್ಲಿಷ್, ಸಂಸ್ಕೃತ, ತನ್ನ ಕಡೆಯ ದೇಶಭಾಷೆ ಈ ಮೂರನ್ನೂ ಚೆನ್ನಾಗಿ ತಿಳಿದಿರಬೇಕು. ತನಗೆ ಹರ್ಷವೂ ಲಾಭವೂ, ದೇಶಕ್ಕೆ ಉನ್ನತಿಯೂ ಸೌಖ್ಯವೂ ಬರುವಂತೆ ಶ್ರಮಬೀಳಬೇಕೆನ್ನುವವನಿಗೆ ಈ ಮೂರೂ ಬಂದೇ ತೀರಬೇಕು; ಇಲ್ಲದಿದ್ದರೆ ಅಷ್ಟು ನೇರ್ಪಿಲ್ಲ.

೬. ಈ ಮೂರನ್ನೂ ಕಲಿಸತಕ್ಕ ಭಾರ ಯೂನಿವರ್ಸಿಟಿಯ ಪಂಡಿತರ

ಮೇಲೆ ಬಿದ್ದಿದೆ; ಉಳಿಸಿಕೊಂಡು ತೇಜಸ್ಸನ್ನು ಹೊಂದಿಸುವ ಭಾರ ವಿದ್ಯಾವಂತರ ಮೇಲಿದೆ. ಆದರೆ ಈ ಎರಡು ಕಡೆಯಿಂದಲೂ ಇವಕ್ಕೆ ಸರಿಯಾದ ಶ್ರದ್ಧೆ ಕಾಣಬರುವುದಿಲ್ಲ. ಇಂಗ್ಲಿಷೇನೋ ಬಲವಾಗುತ್ತಿದೆ; ಮಿಕ್ಕ ನಮ್ಮ ಭಾಷೆಗಳೆರಡೂ ಕುಗ್ಗುತ್ತಿವೆ. ಇಂಗ್ಲಿಷ್ ಕಲಿಯುವ ಹುಡುಗರೆಲ್ಲಾ ಹಿಂದೆ ಕನ್ನಡವನ್ನಾಗಲಿ, ಸಂಸ್ಕೃತವನ್ನಾಗಲಿ ಒಂದನ್ನಾದರೂ ಕಲಿಯುತ್ತಿದ್ದರು. ಈಗ ಅದೂ ಹೋಯಿತು. ಕನ್ನಡ ಸಂಸ್ಕೃತಗಳನ್ನು ಈಗ ಒಟ್ಟಿಗೆ ಕಲಿಯುತ್ತಾರಲ್ಲ ಎನ್ನಬಹುದು; ಇದೇನೋ ಸರಿಯೆ; ಆದರೆ ಎಷ್ಟು ಜನ! ಹೀಗೆ ಮಾಡಿದ್ದರಿಂದ ಮೇಲೆ ಮೇಲೆ ತೇಲಿಸಿಕೊಂಡು ಓದಿ ಬಿ.ಎ. ಡಿಗ್ರಿ ಪಡೆದು ತಾವಾಗಿ ಒಂದು ಗ್ರಂಥವನ್ನು ನೋಡಿಕೊಳ್ಳಲಾರದ ವಿದ್ಯಾರ್ಥಿಗಳು ಹೋಗಿ, ಪ್ರಚಂಡ ಪಂಡಿತರು ಬಂದು ಭಾಷೆಯನ್ನು ಉದ್ಧರಿಸುತ್ತಾರೆ ಎಂದು ಯೋಚಿಸಿ ಏರ್ಪಡಿಸಿದ ಹಾಗೆ ತೋರುತ್ತದೆ. ಹೇಳಿಕೆಯಲ್ಲೇನೋ ಇದು ಮುದ್ದಾಗಿದೆ; ನಡವಳಿಕೆ ತಾನೇ ಅಷ್ಟು ಮುದ್ದಾಗಿಲ್ಲ. ಸಂಸ್ಕೃತ-ಕನ್ನಡವನ್ನು ಆರಿಸಿಕೊಂಡವರು ಈ ಏರ್ಪಾಟಿನಲ್ಲಿ ಪೂರ್ಣ ಪಾಂಡಿತ್ಯವನ್ನು ಪಡೆಯಬಹುದು, ನಿಜ; ಆದರೆ ಆರಿಸಿಕೊಳ್ಳುವವರು ಯಾರಾದರೂ ಉಂಟೋ, ತಿಳಿಯದೆ ಆರಿಸಿಕೊಂಡು ಆಮೇಲೆ ಕೊರಗದವರು ಉಂಟೋ? ಪ್ರಶಸ್ತವಾದ ಗ್ರಂಥಗಳಿಂದ ತುಂಬಿ, ಬಹುಮಾನಕ್ಕೆ ಪಾತ್ರವಾದ ಭಾಷೆಗಳನ್ನು ತೆಗೆದುಕೊಳ್ಳುವುದೇ ಒಂದು ರೀತಿ; ಬಹುಮಾನ ದೊರೆಯದಿದ್ದರೂ ಪ್ರಶಸ್ತವಾದ ಸಂಸ್ಕೃತವನ್ನು ತೆಗೆದುಕೊಳ್ಳುವುದೂ ಒಂದು ರೀತಿ; ಇವರ ಮೇಲೆ, ಎರಡೂ ಇಲ್ಲದೆ, ದುರ್ಬಲವಾಗಿ, ಸಂಸ್ಕೃತ ಪಂಡಿತರಿಂದಲೂ, ಇಂಗ್ಲಿಷ್ ವಿದ್ಯಾರ್ಥಿಗಳಿಂದಲೂ, ಲೋಕ ವ್ಯಾಪಾರದಲ್ಲಿ ತೊಡರಿಕೊಂಡ ಜನ ಸಾಮಾನ್ಯದಿಂದಲೂ ಅಸಡ್ಡೆ ಮಾಡಿಸಿಕೊಂಡು, ಕೈ ಕೊಟ್ಟು ಎತ್ತುವರಿಲ್ಲದೆ ಮುರಿದುಬೀಳುತ್ತಿರುವ ಕನ್ನಡದ ವಿಷಯ ಹೇಳಬೇಕಾದದ್ದೇ ಇಲ್ಲ. ಕೇವಲ ಜ್ಞಾನವಿಕಾಸಕ್ಕಾಗಿಯೇ ಯಾರೂ ಕನ್ನಡವನ್ನು ಓದುವುದಿಲ್ಲ; ಜೀವನಕ್ಕೆ ಮಾರ್ಗವೋ, ಅದು ಕನಸಿಗೂ ಬರಲಿಲ್ಲ. ಜ್ಞಾನವೂ ಇಲ್ಲ, ಜೀವನವೂ ಇಲ್ಲ. ಇನ್ನು ಯಾವ ಪುರುಷಾರ್ಥಕ್ಕೆ ಇದನ್ನು ಕಲಿಯುವುದು? ಒಳ್ಳೆಯದು, ಮುಂದಾದರೂ ವೃದ್ಧಿಯಾದೀತೆಂದು ಅಭಿಮಾನದಿಂದ ಬಹುಮಾನದ ಆಶೆಯನ್ನು ತೊರೆದು, ವರ್ಷಕ್ಕೆ ಮೂರು ನಾಲ್ಕು ಜನ ಸೇರುತ್ತಾರಲ್ಲಾ, ಅವರೆಲ್ಲರೂ ಭಾಷಾಸೇವೆಯಲ್ಲಿ ಬದ್ಧಕಂಕಣರಾಗುತ್ತಾರೆ, ಎಂದೇ

